

# ಸೂಳೆ

ಗುಂಡೂ ಭಂಡಾರ ೧೭

# ಸೂಳೆ

ಅಥವಾ

## ಒಲವಿನ ಕೊಲ

Murder

O'

Mercy.



ಕೈಲಾಸಂ


ಪ್ರಕಾಶಕರು

**ಮಾಧವ ಸನ್ಸ್**

ಬೆಂಗಳೂರು ಸಿಟಿ.

ಸೋಲ್ ಡಿಸ್ಟ್ರಿಬ್ಯೂಟರ್ಸ್

**ಆನಂದ್ ಬ್ರದರ್ಸ್**

ಬೆಂಗಳೂರು ಸಿಟಿ



ಬೆಲೆ ರೂ. ೧-೮-೦

ಕೃತಿರಚನೆ. ೧೯೩೯



ಮುದ್ರಣಕಾರರು
**ಬಿ. ಎಸ್. ವೆಂಕಟರಾವ್**
**ದೇಶಬಂಧು ಪ್ರೆಸ್, ಕೋಟೆ, ಬೆಂಗಳೂರು ಸಿಟಿ.**

**ಕಾಣಿಕೆ :**

ತನ್ನ

ಬಸಿರ ಬಲಿಯಾಗಿ

ನನ್ನ

ಸಹಸ್ರಾರು ಸೋದರಿಯರನ್ನು

ನುಂಗುತ್ತಿರುವ

**ಸ ಮಾ ಜ ಕ್ಕೆ .**

**—ಕೈಲಾಸಂ**

ಹೆಣ್ಣಿನ ಬಾಳು ಕಣ್ಣೀರು:

ಘಟ್ಟ ೧

# ಸೂಳೆ

ಅಥ್ವಾ

ಒಲವಿನ ಕೊಲೆ



ಹೆಣ್ಣಿನ ಬಾಳು ಕಣ್ಣೀರು:

ಘಟ್ಟ ೨

# ಗರ್ತಿ

ಅಥ್ವಾ

ಮೊಮ್ಮಗಳ ಮುಯ್ಯಿ

ಅಥ್ವಾ

ಗುಟ್ಟಾಗಿಟ್ರೆ ಗುಣ್ವಿಲ್ಲ

( ಮೂರು ತಲೆಮಾರುಗಳ ದುರಂತ )

# "ORA PRO NOBIS"



'Let him who hath not sinned throw the first stone'

—Lord Christ

Each Man kills the thing he loves'

O W

"There's so much bad in the best of us,
There's so much good in th' worst of us
It ill behoves smuggest of us
To speak aught ill of th' rest of us"

"As ve treat the lowest amongst ve,
So shall I feel e treat me"

—The Lord

In object Hope & Prayer
That it will see its end
and find itself the
Magnum opus of the author

# ಪಾತ್ರಗಳು

---

**ಮೊದಲನೆ ವಿಟ** An obvious rogue

**ಎರಡನೇ ವಿಟ.** The typical "Minor" of 17 who has come into the lawful propriety of parental property and unknowingly exploited by the ಮೊದಲನ ವಿಟ. He himself honestly falling in blind honest love with ಸೂಳೆ.

**ಉಳಿದ ಅಂಕಗಳಲ್ಲಿ ಬರುವ ಸುಬ್ಬು**

**ಸೂಳೆಯ ತಾಯಿ**

**ಸೂಳೆ.**

**ಪುಟ್ಟಾ ಸೂಳೆಯ ಮಗಳು**

**ಲೇಡಿ ಶಿವದಾಸ ಅಯ್ಯರ್**

**ನಂಜ. ಜವಾನ**

ಈ ರೂಪಕದಲ್ಲಿ ಬರುವ ಪಾತ್ರಗಳೆಲ್ಲವೂ ಸಮಾಜದಲ್ಲಿ ಕಂಡುಬರುವವಾಗಿದ್ದರೂ ಯಾವ ಒಂದು ವ್ಯಕ್ತಿಯನ್ನೂ ಸೂಕ್ಷ್ಮಸಿ ಸೂಚಿಸಿ ಬರೆದದ್ದಲ್ಲ.

# An Induction

## ಪ್ರಸ್ತಾವನ

[Discovered ಸೂಳೆ fourteen of age, (ಹದಿನಾಲ್ಕು ವಯಸ್ಸು) ಉನ್ಮತ್ತರಾದ ಇಬ್ಬರು ವಿಟರು ಸೂಳೆ fixing a garland of flowers round a picture of Saraswati and taking her seat at the Leg harmonium playing the song in dulcet]

ರಾಗ–ಕರ್ನಾಟಕ. ತಾಳ–ತ್ರಿಪುಟ ಚತುರಶ್ರ.

ತಾಯೇ ಭಾರತೀ | ತಾಯೆನಗೆ ಸನ್ಮತಿ || ಪ ||
ವಾಣಿಯೆನುತ ಗೀ | ರ್ವಾಣಿಯೆ ಜನನರ |
ವೀಣಾ ಪುಸ್ತಕ ಪಾ | ಣಿಯೆ ಮಣಿವೇನ್ || ೧ ||
ಶಾರದ ನೀತಿ ವಿ | ಶಾರದ ಜಡತೆಯು |
ನೀರದು ಎನ್ನೊಳು | ತಾರದೇಂದುಮುಖೀ || ೨ ||
ಬಾಲಕಿಯರ ತಿಳಿ | ನಾಲಗೆಯೊಳು ನೀ
ನೋಲಗಿಸುತೆ ಮೃದು | ಲೀಲೆಗಳವಳೀ || ೩ ||

**ಸೂಳೆ ತಾಯಿ.** (ನಿಷ್ಕ್ರಮಿಸುತ್ತಿರುವ ವಿಟರಿಗೆ) ತಿರಗ್ಬರ್ತೀರ ಅಲ್ವೇ ?

**೧ನೇ ವಿಟ.** ಬರ್ದ ಇದ್ದೇವೇ ?

**೨ನೇ ವಿಟ** (ಕಣ್ಣುಗಳಿಂದ ಸೂಳೆಯನ್ನು ಸೂಚಿಸಿ) ಬರ್ದೇ ಇದ್ದೇವೇ ?

**೧ನೇ ವಿಟ** ತಿರ್ಗ ಹೊಸ Supply ಸಮೇತ ಬಂದ್ಬಿಡ್ತೇವೆ

**ಸೂಳೆ ತಾಯಿ.** ಹೋಗ್ಬನ್ನಿ

[ ವಿಟರ ನಿಷ್ಕ್ರಮಣ. ]

# Act I.

## Sc 1

[ಸೂಳೆ at twenty-four (ಇಪ್ಪತ್ತುನಾಲ್ಕು ವಯಸ್ಸು) ಸೂಳೆಯ ಮನೆ Drawing room ಸೂಳೆ and a "Friend"]

**ದೊಡ್ಡ ಮನುಷ್ಯ** ಇಲ್ನೋಡು Dear! ನನ್ಗೆ too much ಆಗಿದ್ರೂನೂವೆ I am There or thereaboutsh ಈಗ ನನ್ನ ನೀನು ಬಿಟ್ಬಿಟ್ರ್ಯೋ Shenshible ಆಗಿ ನುನೇಗ್ಹೋಗಿ ನಾಂ ಹಾಗ್ಯಾದಿರುತ್ತೆ My fateoo My wife you know by name But I know to **my Cost** ಕೂದ್ಲೆಲ್ಲಾ ಕೆದಕ್ಕೊಂಡು ಆಂಜೂರು, ಅಮುಂಡ್, all the Vibgyor Colours of ಬುಳ್ಳಣ್ಣ and ಬುಳ್ಳಪ್ಪ, ಆನಳಿ ಜವಳಿ ಮರ್ಚೆಂಟ್ಸ್ ಅವರ goodsನ Lock stock and barrel ಬಂಗ್ಲೇಗೇನೆ transfer ಮಾಡ್ಕೊಂಡು, bed-room ಬೀರೂ ತುಂಬಾ ಪೇರ್ಸಿದ್ಧೇನೆ ಇದರ ಬೆಲೆಯೆಲ್ಲಾ Debitoo ನನ್ನ Salary bill ನಲ್ಲಿ ಇದ್ದೆಲ್ಲಾ ಬಿಟ್ಬಿಟ್ಟು ನುನೇಲಿರೋ oldest and ಹರ್ಕ್ಲೆಸ್ಟ್ ಷೀರೇನ್ನೂ ಷುತ್ಕೊಂಡೂ, Barton'sh besht jewellsh ಕೊಂಡ್ಕೊಟ್ಟಿದ್ದೇನೆ ಅದ್ನೆಲ್ಲಾ Safeನಲ್ಲಿ shafe ಆಗಿ ಬೀಗಹಾಕಿ ಬೀಗದ್ಕೈನ ಬಚ್ಚಿಟ್ಕೊಂಡು good old ಅಮುರಾ Style ನಲ್ಲಿ "ನಾರಾಯಣೀ ಭದ್ರಕಾಳೀ ರುದ್ರಾಣಿ ರಂಟ ಟಂಟಟಂ! and something elshoo ರೌದ್ರಮುಖೀ Ah! I have got it! ಕಾಳರಾತ್ರಿ losht it again! (ನಿಟ್ಟುಸಿರು ಬಿಡುತ್ತಾ) but anyhow ಈಗ ನನ್ನಿಷೆಷ್ನೂ ನಿಂತಿತಾರ್ಗಳೆ Portico lightsh ನೆಲ್ಲಾ full ಅಗಿ Shwitch on ಮಾ

ಡ್ಕೊಂಡು ಜವಾನ್ರು, Cookshoo, ಮಾಲೀ, ಮುಸ್ರಿ ತಿಕ್ಕೋ ದೇವೀರೀನೂ ಬಿಡ್ದೆ ಸಂಸಾರ ಸುತ್ಲೂನೆ **"ಇದೇನನ್ಯಾಯ ಇಷ್ಟೊತ್ತಿಗ್ಬರೋದು?"** ಅವಳ opening welcomeoo ಇಷ್ಟು further detailsh ಷೇಕ್ಸ್‌ಪಿಯರ್ Hamletಗೆ ಅಪನಪ್ಪನ್ Ghosht ಹೇಳ್ದ್ಹಾಗೆ "I could a tail unfold ಇಲ್ಲಲ್ಲ ನನ್ಹಾಲ ಬಿಚ್ಚೋದು! and yet But I am forbid to tell the shecretsh of my matrimonial prishonoo Derefore Dear! ಈ ಗ ನ್ಬಿಷ್ಟಿಟ್ಟ್ಯೊರೆ, goodಉ! ಮನೇ ಸೇರೋಷ್ಟ್ರಲ್ಲಿ "pull up my shocksh" ಮಾಡ್ಕೊಂಡು ಅವಳ್ನ ಗಾಬರಿ ಪಡ್ಸಿ ಸಟ್ಗ ಒಳಗ್ಹೋಗಿ bed-room ಬಾಗಿಲ್ತಾಪಾಳ ಹಾಕ್ಕೊಂಡು ಬಿಕ್ಕರಿಯೋ ವಗೈರ ಭಯಾಸ್ನೂ ಇಲ್ದೆ ಬಿದ್ಕೊಂ ಡಿಟ್ರೆ ಇಲ್ಲಾ ಇಷ್ಟಾಂದು Drink ಮೇಲೆ ನಿನ್ನ horribly (ಕಾಲದ ಕೈಯಾಗ್ಳು ಸವರುತ್ತಾ) Sweet, ನನ್ನ nonentise ಮಾಡೋ Washನಲ್ಲಿ inshisht ಮಾಡ್ಬ್ಯೇ, ಈಗ Jocose ಆಗಿದೋ ನ್ಯಾಸು ಬಂಗ್ಲ ಹುಟಿಗ್ಯೋಷ್ಟ್ಯೂ ತ್ತಿಗ Bellicose ಆಗಿ ಅವ್ರ curtain lectureಗೆ ಸಂಡ್ಹಾಕಿ, ಆಪ್ಸ್ವೇವಾರಾನಲ್ಲಾ ಬಾಸ್ಕಾಲ್ನಲ್ಲಿ ಒಪ್ಟೋಡ್ಸಿ ಅವಕ್ಹೊತ್ತ horrible Bratsನ ಈ ಗಲಾಟೇಲಿಬ್ಬಿ ಅವುಗ್ಳ ಕಿಲಾಟ ನನ್ನ ಕಿವಿ ತಡೆಯಲಾರದ ಅವುಗಳ್ನ half kill ಮಾಡಿ, ಈ Domestic holocaust Evilಗೆ Root ಆದ **ಶಕುನಿ** Complexed ಮಂಥರಾ—ನನ್ನ Mother in law ನ ಉಗ್ದು, bed ಸೇರಿ ನಿದ್ರೆ ಇಲ್ದೆ ಬೆಳಿಗ್ಗೆ ಎದ್ದು ನನ್ನ peevish wife ನೂ ನನ್ನ helpless ಮಕ್ಕಳ್ನೂ ಎಲ್ಲರನ್ನೂ monthly allowance ನಲ್ಲಿ ಹಾಕ್ಬಿಟ್ಟು, forthwith ನಿನ್ನನ್ನೇ ಗ್ಬಂಧ್ಸೇಕೊಂಡು ನನ್ಮುಂದಿನ Life and Career ಎಲ್ಲಾ ನೀನಾಯ್ತು ನಾನಾಯ್ತು ಎಂಬೋ basis ಮೇಲೆ arrange

Game for anything! ಬೇಗ ಕೂಟ್ಟ್ಯ್ಬಿಡು!
By the way ಹುಕೋರ್ಕೇ ಮರಬಿಟ್ಟೆ, ಇವತ್ತು ನನ್ನ
pay day ನನ್ನ ೩ ನೂರು ರುಪೀಸೂನೂ ಪಾಕೆಟ್ನಲ್ಲಿದೆ
at your disposal ನನ್ನ principle ಒಂದೇ ಒಂದು!
Don't take anything, if you can help it If you take anything, don't forget to pay for it
If you order a thing, foot the bill Therefore
Dear! ಮುಂದಿನ Programmeಉ ಹಿಂದು ಮುಡ್ಡಿಧೀ
ಅಲ್ಲಿ ಕ್ಷಮ್ಸು Bussiness may be business for other people! But ನನಗೋ Pleasure is bussiness **and business is pleasure** Again, therefore, **business is business** and **pleasure is pleasure**!
Quid Erat Demonstrandum! ಅರ್ಥ್ವಾ Dear?

**ಸೂಳೆ** (ಗಟ್ಟಿಯಾಗಿ) ಮುಟ್ಟ! ಹಾಲು ಬಿಕ್ಕೊಂಡ್ಬಾ ಎರಡು ಗ್ಲಾಸ್ ಟಂಬ್ಲರ್ನಲ್ಲಿ ಗರಮ್ಮಾಗಿ! ನಮ್ಮಿಬ್ಬರಿಗೂ

(ಸುಟ್ಟಿ ಕೈಸ್ತ್ರಿ ಬಿಸುವನು.)

**ದೊ. ಮ.** Milkಊ!!!??? **ನನಗೆ!** ಗೊತ್ತಿಲ್ಲ! Milk acts like poison on my system!

**ಸೂಳೆ.** ಅಲ್ರ್ಹೋಡಿ! (ಗೋಡೆಯಲ್ಲಿ ತಗುಲಿಹಾಕಿದ ಒಂದು ಚಿತ್ರಪಟವನ್ನು ತೋರಿಸಿ) B A ಪಾಸ್ಮಾಡಿ ಸಂಸ್ಕೃತ ಪ್ರೊಫೆಸ್ಸ್ರ್ ಲ್ಲೀವು. ಅದರ್ಲೇನ್ತಪ್ಪಿದೆ ಹೇಳಿ ನೋಡೋಣ? [ಪಟವನ್ನು ನೋಡುತ್ತಾ ತಲೆಯಾಗುವ ದೊ. ಮ. ಯನ್ನು ನೋಡಿ] ಹಾಗೆಲ್ಲಾ ನೋಡಿದ್ರೆ ಗೊತ್ತಾಗುವುದಿಲ್ಲ ಆ ಪಟದಲ್ಲಿರೋ ತಪ್ಪು ಇಲ್ಬಂದು ಸ್ವಲ್ಪ ಹಾಲ್ಕುಡಿದ್ಬಿಟ್ಟು ಯೋಚಿಸಿ ಹೇಳಿ!

**ದೊ. ಮ** (ಸೂಳೆಯು ನೀಡಿದ ಗಾಜನ್ನು ಸ್ವೀಕರಿಸಿ) ನಾನು ಈಗೇ ನಾದ್ರೂ Drink ಮಾಡಿದ್ನೋ? ನನ್ನನ್ನಾಗತ್ತೀಯ? ಬರೀ milk ಕೊಡ್ತಾ ಇದ್ದೀಯ? Let me assure you dear ಈಗೊಂದು Whole Cask of Brandyಲಿ ನಾನು ಇಳಿದು ಮುಳುಗಿ ಎದ್ದು ಒಂದು Drop of Soda ಕೂಡ ಕೇಳ್ದ ನತ್ತೇನೂ in really good "spirits" Therefore ದಮ್ಮಯ್ಯ! Dear! ಪ್ರಾವಕ ಏನಾದ್ರೂ ಇದ್ರೆ premisesನಲ್ಲಿ, ಧಾರ ಎರೆ ಈ ಗ್ಲಾಸಿನಲ್ಲಿ only as an antidote against this poisonous animal food! Cow's milkಉ is liquid beefಉ! That is why I drink Whisky, Vegetation foodಉ! ದಮ್ಮಯ್ಯ! send for the stuff! Money ಇದೆ pocketಉ!

**ಸೂಳೆ** ಮಲ್ಲಗಿರ್ತಾಡಿ! ನನ್ನ ಲಾವಣ್ಯದ ಮುದ್ದು ಈ ಹಾಲ್ನ ಒಂದ್ಸಾಯಿಗ್ಕೊಂಬಿಟ್ಟು, ಆ ಮೇಲೆ ನಾಗಾಡಿ (ಎನ್ನುತ್ತಾ ತನ್ನ ಕೈಯಲ್ಲಿರುವ ಹಾಲು ತುಂಬಿದ ಗಾಜನ್ನು ಅವನ ಬಾಯಿಗೆ ಸಮೀಪಿ ಸುತ್ತಾ) "ಚ್ಹೀರ್ಯೋ!" (ಎಂದು ನಗುವಳು)

**ದೊ. ಮ.** 'ಚ್ಹೀರ್ಯೋ!" Dear (ಎನ್ನುತ್ತಾ ಗಾಜಿಗೆ ಗಾಜನ್ನು ತಾಕಿ ಸುತ್ತಾ) "Chin! Chin! plush ನಿನ್ನ adorable Chinಉ (ಎಂದು ಗಾಜನ್ನು ಸರಿಸಿ ಗಲ್ಲಕ್ಕೆ ತಾಕಿ, ಅನಂತರ ಬಾಯನ್ನು ಸಮೀಪಿಸುತ್ತಲೇ ನಾಸಿಕ ರಂಧ್ರಗಳು ಹಾಲಿನಿಂದ ಹೊರಡುವ ಹಬೆ ಯನ್ನು ಆಕರ್ಷಿಸಿ, ಆಘ್ರಾಣಿಸಿ, ಅನುಭವಿಸಿ) Funny smelloo! Funnier milkoo! funniest cowoo that exuded this milkoo! in all my late and not lamented mortal lifeಊ! never met this sort of milkಉ! ಇದೇನದ್ಭುತ! Cowವೇ or ಎಮ್ಮೇದೇ? ಎಮ್ಮೆ!

or good old ಮಹಿಷಾಸುರಾ's well bereaved widowsದೇ ? ಇಲ್ಲಾ ಈ Cowಊ Cow shapeನಲ್ಲಿ Distillery ಕಟ್ಟಿ ಇರಬಹುದು ! Aspinnal's white Enamelನ್ನ pour in ಮಾಡಿದ B C D ಹಾಗೇ ಇದೆಯಲ್ಲಾ ? ಏನ್ಮಿಲ್ಕು ? ಇದು ?

ಸೂಳೆ. Cow ಹಾಲೇ ! ಮನೇಲ್ಕರದ Cowನ್ಹಾಲು ! (ಕಪ್ಪಿನ ಹಾಲು) Milkoo ! "ಗರ್ರಂ"—"ಬಿಸಿ" ಅಂತಾರಲ್ಲಾ . ಹಾಗ !

ದೊ ಮ. ಗರ್ರಂ ಹಾಲು ? from a Cow ? Therefore ಗರ್ರಂ Cowಉ ! Q E D ! Euclid can't object ! ಪಶೂಂತಾರಲ್ಲಾ ತಪ್ಪು ! ಪಶೂಗೆ taste ಇಲ್ಲಾ ! But this Exceptional ಪಶೂ — ಕಾ ಮ ಧೇ ನು be damned ! "Martell's Three Stars" ಮೇಲೆ ಖಾಯಿಷ್‌ಬಿದ್ದ Cow ? Wonderful milk of a cow brought up on "Martell's Three Stars" Brandy ಇಂಥಾ milkನ ಕರಿಯೋ Cowನ ನಾಳೆ Cattle exhibitionನಲ್ಲಿ Auction saleಗಿಟ್ಟ್ರ್ಯೇ Spencer's closhedoo Funnels ಬಾಗಿಲು ಬೀಗ

ಸೂಳೆ ನಾಕ್ಸ್ನಾಕು ! ನಿಮ್ಮ Speechoo (ಪ್ರಸಂ ಪೂರ್ವೋಕ್ತ ಪರ ವನ್ನೇ ಸೂಚಿಸುತ್ತಾ) ಆ ಬಲಿಚಕ್ರವರ್ತಿ ಪದ್ದಲ್ಲಿರೋ ತಪ್ಪನ್ನ ಈಗ್ಲಾದ್ರೂ ಇತ್ಯರ್ಥಮಾಡಿ ನೋಡೋಣ ?

ದೊ. ಮ (ಕೈಲಿರುವ ಗಾಜನ್ನು ಖಾಲಿಮಾಡಿ ಮೇಜಿನ ಮೇಲಿಟ್ಟು ಚಿತ್ರ ಪಟವನ್ನು ಸಮಿಾಪಿಸಿ) pictshure ! ಬಲಿ ಚಕ್ರವರ್ತಿ Emperor of all the worlds going down into

hell Hard lines, old chappie! But then ಯಾರೋ ಹೇಳ್ದ್ರು ಗೆ great placeoo Heavenoo, for Comfortsh ಗೆ ಇಂಪ್ರ plush all the absurd ಸ್ಟ್ರೀನ್ for really good **Company** where my best pals are Hellಉ! ಪಾಪುನ! ಸಿಷ್ಣು Boss of the Show of Course ಬಲ good shport But can't help it! Born ರಾಕ್ಷಸ! Shins of bad parents visited on good children however good Therefore, must go down painter, Ravivarma accidentally also artist, Gold medallist in Vienna and Paris, Royal Family, Maharaja of Travancore's relationoo, ರವಿವರ್ಮ, ರಾಜಾ ರವಿವರ್ಮ Therefore nothing can be wrong with picture Raja Ravivarma painteroo, Raja Balee titleoo Raja Versus Raja—Private Quarrelloo Q. E. D. mind my own business ಉ! (Raja Raja!) ಸ್ಕೀನೂ - ನಾನು Cut out the Cackle! Come back to brass tacks ಅಲ್ವೇ! Dear? ಯಾಕೆ Dear! ಓಹೋ! [ತಾನು ಪಟವನ್ನು ನೋಡಿ ಸಂತಸಾದುತ್ತಿರುವಾಗ ಅವನ ಬೆನ್ನಿನ ಹಿಂದೆ ಅವನ ಜೇಬಿನಲ್ಲ ಇದ್ದ ನೂರು ರೂಪಾಯಿ ನೋಟುಗಳಲ್ಲಿ ನಾಲ್ಕನ್ನು ಸ್ವಸ್ಥಾನ ಪ್ರಾಪ್ತಿಸಿ ಹವನೆಯುವನ್ನು ಸುಬ್ಬುವಿನ ಕೈಗೆ ಸೂಳೆಯು ಕೊಡುತ್ತಿರುವುದನ್ನು ನೋಡಿ, ಅವಳ ಹತ್ತಿರಕ್ಕೆ ಬಂದು] ಎಷ್ಟು Dear! Damageoo?

**ಸೂಳೆ** ಇಪ್ಪತ್ತು percentoo! ಯಾವಾಗಿನ ಹಾಗೇ! ಯಾಕೆ ಕೇಳಿದ್ದು?

**ದೊ. ವು.** ಕ್ಷಮ್ಸ್ಬಿ, Dear! ಎದಲ್ಲ ನಾನು ಕೇಳಿದ್ದು ಯಾವಾ

ಗಿನ ಹಾಗೇ Plus ಈವತ್ತಿನ Damagesoo ಎಷ್ಟೂಂತ ?

**ಸೂಳೆ** ಈವತ್ತಿನ Damagesoo 'ನನ್ಬಿಷಿ" ನಾನು ನಿನುಗೆ ಕೊಡೋ "ಬಕ್ಷೀಸ್ !" ನನಗೆ ನಿಮ್ಮ ಬುದ್ಧಿ • ಮುಂಕುತನಾ ನ್ನೋಡಿದ ಸಂತೋಷದಲ್ಲಿ !

**ದೊ. ಮ.** ಬುದ್ಧಿ ಮುಂಕು ! ನಾನು ! .Treble first class plus economy medal ?

**ಸೂಳೆ** ನಿಮ್ಮ first classನೂ ನಿಮ್ಮೆಡಲ್ಲೂ ಮೂಲೆಗೊದ್ದು ಇಲ್ಬನ್ನಿ ! (ಮುದ್ಧ ಮನುಷ್ಯನ ಕೈಯನ್ನು ಹಿಡಿದು ಪ್ರೊಫೋರ್‌ಕ್ತ ಪರವನ್ನು ಸಮಿಸಿಸಿ) "no mistakeshoo" Ravivarma" "Raja Family !" ಅಂದ್ರಲ್ಲಾ ಎಲ್ಲಾ ಕೇಳ್ಲಿ ಸ್ವಲ್ಪ ನನ್ನ ಮಾತನ್ನೂ ಗನುಸಿಸಿ . ಬಲಿ ಚಕ್ರವರ್ತಿ ಯಜ್ಞ ಮಾಡ್ತಿದ್ದಾಗ ಪುಟ್ಟ ಕಾಲಿಟ್ಕೊಂಡು ಒಬ್ಬ ಕುಳ್ಳ ಬ್ರಹ್ಮಚಾರೀ 'ಪ್ರಪಂಚಕ್ಕೆಲ್ಲಾ ಚಕ್ರವರ್ತಿ ನೀನು ನನ್ಗೆ ಜಾಗ್ದಲ್ಲಿ ಮೂರ್ಹೆಜ್ಜೆ ಜಾಗೀನ್ಕೊಡು" ಅಂತ ಬೇಡ್ಕೊಂಡು, "ಹೂಂ' ಅಂತ ಆ ಸತ್ಯವಂತ ಹೇಳೋಹಾಗೆ ಪ್ರಸಲಾಯಿಸಿ "ಹಾಗಾದರೆ ಅಳಕೋ ನಿನ್ನ ಮೂರ್ಹೆಜ್ಜೇನ" ಅಂತ ಉದ್ಧರಣೆ ಪಂಚಪಾತ್ರೆ ಕೈಯಲ್ಲಿ ಹಿಡುಕೊಂಡು ಧಾರೆ ಎರೆಯೋಕೇಂತಾ ಆ ಪ್ರಾಣಿ ಕಾದಿರೋವಾಗ ಭೂಮಿಯೆಲ್ಲಾ ಒಂದ್ಹೆಜ್ಜೆ ಆಕಾಶ ಎಲ್ಲಾ ಇನ್ನೊಂದ್ಹೆಜ್ಜೆ ಹೀಗ ಮುಚ್ಚಿ, ಜಟ್ಟಬಿಟ್ಟ ಆ ಬಲೀನ, "ನೀನ್ಕೊಟ್ಟ ಎರಡು ಹೆಜ್ಜೆ ಆಯಿತು ಕೊಟ್ಟ ಮಾತು ತಪ್ಪೋದಿಲ್ಲ ನೀನು—ನೀನ್ನಾತ್ಕೊಟ್ಟ ಮೂರ್ನೆಹೆಜ್ಜೆ ಇಡೋಕೆ ಜಾಗಾ ಎಲ್ಲೀ ?' ಅಂತ ಕೇಳಿ.. "ನಿನ್ಯೋಗ್ಯತೆ ಅರೀದೆ ನಾನ್ಮಾತ್ಕೊಟ್ಟದ್ದು ನನ್ತಪ್ಪು ಆದ್ರೂ ನನ್ನ ನಾಲ್ಗೇನ ಕಾಪಾಡ್ಕೊಳ್ಳೋದು ನನ್ಧರ್ಮ ಆದ್ದರಿಂದ ನಾನ್ದಾನಾ ಮಾಡಿದ

ಮೂರನೇ ಹೆಜ್ಜೇನ ನನ್ತಲೇ ಮೇಲೆ ಇಡು" ಅಂತ ತಲೆಬಾಗಿ ಪಾತಾಳಕ್ಕೆ ಟ್ಟಿಸ್ಕೊಂಡದ್ದು ಎರಡ್ಕಾಲೇ ಇರೋ ಈ ರವಿವರ್ಮನ ಪರದ ವಾಮನನಿಂದಲ್ಲ! ಬಲಿಚಕ್ರವರ್ತೀನ ಪಾತಾಳಕ್ಕಳ್ಳಿದ್ದೂ ....ತ್ರಿವಿಕ್ರಮ ವಾಮನನಲ್ಲ! ಅದೊಂದೇ ತಪ್ಪು ಚಿಕ್ಕಿಕ್ಕಿಕ್ ....ಪುಟ್ಪುಟ್ಪುಟ್ತಪ್ಪು (Suits action toward by slapping the ದೊ. ಮ. on his cheeks and chin)

**ದೊ. ಮ.** My God! ಏನ್ Grey matterಪ! ನಿನ್ನ horrible craniumನಲ್ಲಿ! ಏನ್ Piamaterಪ! ನಿನ್ನ್ಪುಟ್‌ಕೊಂಡೇಲಿ! Physiologyಲೀ terribleoo!— accent on all the syllablesoo! . ನಾನು! **terrificcoo!** plus logic! Therefore, ಕೇಳು dear! ನೀನೂ Womenoo First premise. ನನ್ನ Wifeoo womanoo, second premise ...But, forgive me, dear! ನಾನೂ manoo! Third premise but not my fault! **moreover** don't forget Educated manoo! no question of that! Besides Ravivarma also a manoo! painter chappie! plus ಇನ್ನೊಬ್ಬ Manoo myself explain ಮಾಡೋ ನಾನು us all ಗಂಡ್ಸ್! —The Eternal Joker ವಿಷ್ಣು ತ್ರಿವಿಕ್ರಮ Stuntಉ ಮತ್ತಿಗಟ್ಟು on our male behalf ನಿನಗೆ ... ನಮ್ಮಗಳ apologiesಅ Submit ಮಾಡ್ತೇನೆ . .of course Ravivarma now' dead as a door nailoo' .ವಾಮನ and Bali double dead as double dead doornailsoo Transformation sceneಉ! .ತ್ರಿವಿಕ್ರಮ and publishers of pictureoo ಎಲ್ಲೋ ಏನೋ ?. Therefore sole representative ನಾನು Submit ಮಾಡ್ತೇನೆ ...ತ್ರಿವಿಕ್ರಮ ನೀನ್ಹೇಳ್ದಿ

"Poi Contia" ಅಂತ ನಮ್ಮ "ರಿಪ್ರೋರ್ಟ್"ನಲ್ಲಿರೋ ಹಾಗೆ

But dear! ಈ ಪರದ ಗಲಾಟೇಲಿ ನಿನ್ನ wondeiful brainoo !? I mean ನಿನ್ನ intellect!? ನಿನ್ನ intelligence!!! **ಅಲ್ಲಾ ಈಗ್ನನ್ನ** wife ನೋಡು! ಅವಳ್ Brainoo ತೊಕ್ಕೋ! ರಾವಣಾಸುರ ತನ್ನ ಪ್ರತ್ರಿಕೃಲೂ ಇಪ್ಪತ್ತು ಆಕರ್ಾಟು ಚಡಾವ್‌ಗಳ್ನಾ ಹಿಡ್ಕೊಂಡು ಪ್ರಹ್ಲಾದನ ಕೆನ್ನೆಕೆನ್ನೆಗೂ ಬಜಾಯಿಸ್ತಾ, ತನ್ನ ದಶಕಂಧರಗಳಿಂದ ಏಕ ಗ್ರೀವನಾಗಿ, 'ನಮ್ಮಪ್ಪ ಹಿರಣ್ಯಕಶಿಪೂನ ಫಲಾನ್ ಇದೇ ಕಂಬದಲ್ಲಿ ತೋರಸ್ತೀಯೋ, ಇಲ್ಲಾ ಅಲ್ನೋಡು! ನನ್ನ ತಪೋಬಲದಿಂದ ತರ್ಸಿ ತಯಾರಾಗಿ ತಂದು ನಿಲ್ಸಿರೋ ಆ ತಾಟಕಿ ಬಾಯ್ಗೆ ತುತ್ತಾಗ್ತೀಯೋ ನೀನು?" ಅಂದ್ದಾಗೂ, ಆಗ ಕಂಬ ಬಿರಿದು Bisect ಆಗಿ, ಆ Broken bits of ಕಂಬದಿಂದ ಕಂಸ ಸುಯೋಧನರು, ಸೀತಾ ಸಾವಿತ್ರಿಗಳ ಸಮೇತ ಸಿಗರೇಟ್ ಸೇದ್ತಾ ಕೆಳಗಿಳದ್ದಾಗೂ cut sceneಉ!, audienceಗೆ ಆಶೀರ್ವಾದಕ್ಕೆ ಸರ್ವರೂ ... the whole tableaux, ನೀನೂ ನಾನೂ ಕೂಡ ತಲೆಬಾಗಿದ ಹಾಗೂ

ಒಬ್ಬ, not yet boin ಅಲ್ದೆ will nevei be boin paintei ಬರೆದಾಂತಿಟ್ಟೊ ಒಂದು ಪರಾನ! Hypothetically assuming boiling down to oui common oi gaiden-deai old "ಮಸ್ಲಾ"! ಆ ಪರದಲ್ಲಿರೋ ಒಂದು ಹುಳುಕೂನೂ ಹೊಳೀದೆ ನನ್ನ Haiibrained wifeಉ! ಅವಳ ಮಿದುಳಿಗೆ ... ಅದ್ನ ದೇವರ್ಮನೇಲ್ಲಿಟ್ಟಗಲ್ಕೊಂಡು ತ್ರಿಕಾಲವೂ ಪೂಜ ಮಾಡೋ ಬೆಪ್ಪುತಕ್ಕಡಿ ನನ್ನ wifeoo! Theiefoie pen and ink and papeiನ ಈಗ ಕೊಟ್ಕೊಬ್ಯೇ ನನ್ಗೆ ಕೈಗೆ ನನ್ನ position as husband ರಾಜೀನಾಮೆ ಕೊಟ್ಬಿಟ್ಟು ನನ್ನ wifeಗೆ ಅವಳ್ನೂ, ಆ ರಾತ್ರಿ ಎಲ್ಲಾ ಕಿಲ್ತಾರ್ ನನಗ್ಬರೋ half an houi's sleepನೂ disturb ಮಾಡೋ

ಅವಳ್ಳಿತ್ತ ಮಕ್ಕಳ್ನೂ monthly allowanceನಲ್ಲಿ ಹಾಕ್ಬಿಟ್ಟು, ತೆಪ್ಪಗೆ ನಿಮ್ಮನೆಗ್ಬಂದು Sensible ಆಗಿ ನಿನ್ನೊಟ್ಟೀಲಿ ಸಂಸಾರ ಮಾಡ್ಬೇಕಾಗುತ್ತೆ ! pen and ink ಇಲ್ಕೊಡು

**ಸೂಳೆ** ನೀವು ಕೊಡೋ ರಾಜೀನಾಮೆ ನಿಮ್ಮ ಆಫೀಸ್ ಪೇಪರ್‌ನಲ್ಲೀ .. ನಿಮ್ಮನೆಯಿಂದ . ನಿಮ್ಮನ್ನಂಬಿ ನಿಮ್ಮಾವನೋರು ನಿಮಗೊಪ್ಪಿಸಿದ ನಿಮ್ಹೆಂಡ್ತೀಗೆ ಕೊಟ್ಕೊಳ್ಳಿ ! ಸಧ್ಯ ಒಂದು ಮರೀಬೇಡಿ (ದೊಡ್ಡ ಮನುಷ್ಯನ ಹತ್ತಿರ ಬಂದು, ಎರಡು ಭುಜಗಳನ್ನೂ ಹಿಡಿದು ಒದರಿ ಕೊಡವಿ) ಇದೇನ್ರೀ . ಹೀಗೆ ಈವತ್ತೂ? ಮೂವತ್ಮೂರು ಬಾಟ್ಲು ಮುಗಿಸ್ಬಿಟ್ಟು ನೆಟ್ಟಗೆ ಮನೇಗ್ಹೋಗೀ ಸಂತೋಷವಾಗಿ ನಸುನಗ್ತಾ ನಿಮ್ಮನೆಯಾಕೆಗೂ ಮಕ್ಕಳ್ಗೂ ತೋರಿಸ್ರಿ ಇಲ್ದೆ ಯಾವಾಗ್ಲೂ ಹೋಗ್ತಿದ್ದ ನೀವು .. ಈವತ್ತ್ಯಾಕ್ಹೀಗೆ ? (ಪುನಃ ಭುಜವನ್ನು ಜಗ್ಗಿಸುತ್ತಾ) ಚೇತರಿಸ್ಕೊಳ್ಳೀ ! ನೀವೂ ನಿಮ್ಮನೆಯೋರೂ ಸುಖವಾಗಿದ್ರೇ ನನ್ಗೀವ್ನ (ಬಲಗೈಯನ್ನು ದೊಡ್ಡ ಮನುಷ್ಯನ ಕುತ್ತಿಗೆಯ ಮೇಲೆ ಹಾಕಿ ಬೀದಿಯ ಬಾಗಿಲ ಕಡಗೆ ಎಳೆಯುವಳು).

**ದೊ. ಮ** ಕ್ಷಮಿಸು Dear! of course ನೀನು **ನೀನು** ... But I hate being dragged and dictated to I agree ಒಂದೇ ಒಂದು condition ಮೇಲೆ ಒಂದು last, longing, lingering, luscious kissಉ of ಕಾಳಿದಾಸ ಹೇಳ್ದ್ಹಾಗೆ—your ಬಿಂಬಾಧರ lips ಇಲ್ಲೇ .ಇಲ್ಲೇ Collapseಉ !

**ಸೂಳೆ** · ನಿಮ್ಮ Conditionಗ್ಳೆಲ್ಲಾ ತುಂಡು! ಬನ್ನಿ ! (ಎನ್ನುತಾ ದೊಡ್ಡ ಮನುಷ್ಯನನ್ನು ಮುದ್ದಿಸಿಂದ ಕಾಲು ಪಾಲು ಎಳೆಯುತ್ತಲೂ ಮುಕ್ಕಾಲುಪಾಲು ಹೊರುತ್ತಲೂ ಹೊಸಲನ್ನು ಸಮೀಪಿಸಿ) ಓ ನಂಜಾ !

**ಸಂಜ** (ಪ್ರವೇಶಿಸಿ) ಅಮ್ಮಾ !

**ಸೂಳೆ** ಸಾಹೇಬರ Driver ಎಲ್ಲೋ? ನಿನ್ಗೇ ನಿನ್ನ ಫಲ ನಾಳೆ ಗೊತ್ತಾಗುತ್ತೆ ಸಂಬ್ಳ ಕೇಳೋವಾಗ ..ಸಾಹೇಬ್ರ Driveıoo ನಿನ್ನ ಹಾಗೇನೇ ನಿದ್ರೆಯೇನೋ ?

**ಡ್ರೈವರ್** (ಸಮೀಪಿಸಿ) ಅಮ್ಮಾ !

**ಸೂಳೆ** ಸಾಹೇಬರ ಸಂಬಳ ಏನಾದ್ರೂ ಬಾಕೀನೇ ?

**ಡ್ರೈವರ್** ಇಲ್ಲಮ್ಮಾ !

**ಸೂಳೆ** ಮತ್ಯಾಕೇ ನಿನ್ನಿದ್ರೇ ? ನಿನ್ನ Duty ಮತ್ತ್ಯಾರ್ ? ನಿನ್ನ ಧಣೀನ ಬಂಗ್ಲೆ ಸೇರ್ಸೋಕ್ಮುಂಚೇನೆ ನಿದ್ರೇನೇ ?.. ಯಾರುಪ್ಪು ತಿನ್ತಿರೋದ್ನೀನು ಜ್ಞಾಪ್ಕ ಇಧೆಯೋ ?

**ಡ್ರೈವರ್** ಕ್ಷಮಿಸೀಮ್ಮಾ ತಪ್ಪು ನಂದು ತಾಯಿ ! (ಸಮೀಪಿಸಿ) ಮತ್ತ್ಬರಡಿ, ನಿದ್ದೆಗಣ್ಣು, ದಿನವೆಲ್ಲಾ Dııve ಮಾಡ್ದೇ ! ಧಣಿಗಳ್ನ ಹುಷಾರಾಗಿ ಬಂಗ್ಲೆ ಸೇರಿಸ್ತೇನೆ ! ಮರತ್ಬಿಡಿ ತಪ್ನಾ ! (Dııveı ದೊಡ್ಡ ಮನುಷ್ಯನನ್ನು ತನ್ನ ವಶಕ್ಕೆ ಮರ್ಯಾದೆಯಿಂದ ಮೆಲ್ಲಗೆ ವಹಿಸಿಕೊಂಡು ನಿಷ್ಕ್ರಮಿಸುತ್ತಿರಲು)

**ಸೂಳೆ** (ಮೆಲ್ಲಗೆ ಅವನಿಗೆ) ನಿನ್ನ ಮಾಮೂಲೇನೂ ಮರ್ತಿಲ್ಲಾ Driveı ! ಸುಬ್ಬೂ ನಾಳ ಸಲ್ಸಾನೆ .ನಿನ್ನ ಕುಂದುಕೊರ್ತೆಗಳ್ನಾ ! (ಡ್ರೈವರ್ ನಿಷ್ಕ್ರಮಿಸಲು, ಹೊಸಲಿನಿಂದಲೇ) Drinkಓ (ಬಿರುಸಾಗಿ) ಏನ್ಮಾಡ್ತಾ ಇಧೀಯಾ ? (ಸುಬ್ಬುವು ತಂದ ಗಾಜನ್ನು ಒಂದೇ ಗುಟುಕಿನಲ್ಲಿ ನುಂಗಿ ಹೊಸಲಿಗೆ ಒರಗಿಕೊಂಡು) ಚಿನ್ನದಂಥಾ ಹುಡುಗ ! Thank \ou ಸುಬ್ಬು !! ಮುಂದಕ್ಕೆ ಬರೋನು ಇವ್ನು! ಇವನ ಹೆಂಡ್ತೀನೋ. ಇವನಿಗಿಂತಾ ಬುದ್ಧಿ ಹೆಂಡ್ತಿ

ಗಾರ್ಕೇಲಿ ಮಾತ್ರ ಪೆದ್ದು ! .(ನಿಟ್ಟುಸಿರುತ್ತಾ) ಇವನ್ಯೋಗ್ತೆ ಅವಳಿಗ್ಗೊತ್ತಿಲ್ಲ ! ಅವಳ್ಯೋಗ್ತೆ ಇವ್ನಿಗ್ಗೊತ್ತಿಲ್ಲ ! ಅನ್ಯಾಯ ಸುಬ್ಬೂ ! ದೇವಕರ್ಕೊಟ್ಟ ಅಲ್ಪಸ್ವಲ್ಪ ಭಾಗ್ಯಾನ್ನೂ ಅನುಭವಿಸ್ದೆ ಇವನೋ !? ಅವಳ ಯೋಗ್ಯತೆ ಅವಳ ರಕ್ತ **clean** ಅಂತಾರಲ್ಲಾ **ಅದು** ಅವ್ಳು! ಆದ್ರೆ ರೇಗ್ತಾಳೆ ಬೇಗ ದೊಡ್ಡ ರಕ್ತದ್‌ಜೋರು, ದೊಡ್ಡ ಕುಟುಂಬ ಹೀಗೆ ಕುಡಿಯೋದು . ಹೊತ್ತು ಬಿಟ್ಟು ತಲೆ ತೂಗ್ತಾ ಮನೇಗ್ಬರೋ ಗಂಡ್ಸ್ರ ಅಭ್ಯಾಸವಿಲ್ಲ ಅವಳ್ಕುಟುಂಬಕ್ಕೆ ನೀನ್ಹೇಳ್ತೀಯಲ್ಲಾ, Tactic ಅದೆಂಥಾದ್ದು? ಹೂಂ ! Diplomatic ಅದಿಲ್ಲ ... ಅವಳ್ಳ ತೋಟೀಲಿ ಅಪರಂಜಿ ಹುಡ್ಗಿ ! ಆದ್ರೇನೋ . Up-to date ಅಲ್ಲಾ ! ಅವಳು ಹುಚ್ಚುಚ್ಚಾಗಿ ರೇಗೋ ಗಲಾಟೇಲಿ ಅವಳ ಯೋಗ್ಯತೆ ಈ ಮಗೂಗೆ ಗೊತ್ತಾಗೋದಿಲ್ಲ. ಹೀಗೇ ನೋಡ್ಸುಬ್ಬೂ! (ಅವನ ಕಡೆ ತಿರುಗಿ) "ಏನ್ಮಾಡ್ತಿಧೀಯಾ?" (ಮತ್ತೆ ಮೊದಲಿನಂತೆ) ಈ ಕಾಲದ ಸಂಸಾರಗಳಲ್ಲಿ ಗಂಡ ಹೆಂಡತಿಯರು ಒಬ್ಬೊಬ್ಬರ ಯೋಗ್ಯತೇನ ಅರೀದೆ . ರೇಗಿ .. ತಮ್ಮ ತಮ್ಮ ಕಣ್ಣಿಗೆ ಎಣ್ಣೆ ಬಿಟ್ಕೊಂಡು ಪರಸ್ಪರ ಐಬುಗಳನ್ನು ಹುಡ್ಕಿ ಹೇಸ್ಗೆ ಪಟ್ಕೊಳ್ಳೋದ್ರಿಂದ ಮುಂದಕ್ಕೆ ಬೆಳೆದು .. .ಹಬ್ಬಿ ಹರಡೋ ಎಷ್ಟು ಸಾವಿರ ಕುಟುಂಬಗಳು ಹಾಳಾಗ್ತಿವೆ ಈಗ **ಈಗ** ಗೊತ್ತೆ ಸುಬ್ಬೂ? (ಸುಸ್ತಿನಿಂದ ನಿಟ್ಟುಸಿರಿಟ್ಟು, ಬಾಗಿಲಿನ ವಾಸ್ಕಾಲಿಗೆ ಒರಗಿಕೊಳ್ಳುವಳು).

ಸುಬ್ಬು ಯಥಾಪ್ರಕಾರ ಚಿನ್ನಾ.... .ಇಷ್ಟು ಹೊತ್ತಿಗೇ, ಇಷ್ಟೇ Drinksoo ಆಗತ್ಲೂವೆ ಇದೇ ತತ್ವದ್‌ಲೆಕ್ಚ್ರು ನಿಂದು ಊಟಮಾಡಿ ಮಲಕ್ಕೋ ಚಿನ್ನಾ . ಮಧ್ಯಾಹ್ನಾನೂ ನಿದ್ದೆ ಇಲ್ಲ ... ತಡಿಯೋದಿಲ್ಲ ಚಿನ್ನ ನಿನ್ ದೇಹ ಇವತ್ತೆಲ್ಲಾ Shoppingoo ಜ್ವರವೋ ನೆಗಡೀನೋ . ಒಟ್ನಲ್ಲಿ ಡಾಕ್ಟರ್ ವಾಲಾಗ್ತೀಯ (ನಯವಾಗಿ, ಖಾಲಿಯಾದ ಗಾಜನ್ನು **ಸೂಳೆಯ**

ಕೈಯಿಂದ ಬಿಡಿಸಿ ತೆಗೆದುಕೊಂಡು ಸೂಳೆಯನ್ನು ಸೋಫಾ ಕಡೆಗೆ ಒಯ್ಯುತ್ತಾ) ಬಾ ಚಿನ್ನಾ ! (ಮೆಲ್ಲಗೆ ಒರಗಿಸುವನು).

ಸೂಳೆ (ಸೋಫಾವಿನ ಬೆನ್ನಿನ ಮೇಲೆ ಕುತ್ತಿಗೆಯನ್ನು ಒರಗಿಸಿ ಕೊಂಡು) ನಿಜ ಸುಬ್ಬೂ ! ನೀನ್ಹೇಳೋದೆಲ್ಲಾ ನಿಜ ! ಆದ್ರೂನೂವೆ ನಾನು ಹ್ಯಾಗೆ ಹೇಳ್ಕೊಳ್ಳಿ? ಒಂದೊಂದ್ಸರ್ತಿ ಹೊಟ್ಟೆ ಉರಿಯುತ್ತೆ .. ಇಲ್ಲಾ ಉಕ್ಕುತ್ತೆ ಇಲ್ಲಾ ತೊಳಸುತ್ತೆ ಒಟ್ನಲ್ಲಿ ಎಲ್ಲಾ ಸಂಕಟಾ ಸುಬ್ಬೂ ..ಸಮಸ್ತವೂ ಸಂಕಟ (ಥಟ್ಟನೆ ಕಣ್ಣುಗುಡ್ಡೆಗಳನ್ನು ಬಾಗಿಲಕಡೆ ಹೊರಳಿಸಿ ನಿಲ್ಲಿಸಿ) ಹಾರನ್ನು ! .ಬ್ಯೂಕ್ ಅಲ್ಲವೇ ? ಅತ್ನೇ ?

ಸುಬ್ಬು ಹೌದು Buick horn ಏ ಅತ್ನೇ ! ಇಷ್ಹೊತ್ತನ್ನಲ್ಲಿ ಬಂದೇನ್ಗಲಾಟೆ ಮಾಡ್ತಾನೋ !? ಆದ್ರೂವೆ ಒಳ್ಳೇ ಮನಸ್ಸು.

ಸೂಳೆ **ಗಲಾಟೇ ? ಇಲ್ಲಿ ?** (ತುಟಿಗಳನ್ನು ಬಿಗಿಯುತ್ತಾ ಉಚ್ಛ್ವಸಿಸಿ ಮತ್ತರುಗಿ ತುಟಿಗಳನ್ನು ಸ್ವಲ್ಪ ಸಡಿಲಿಸಿ) ನನ್ನ್ಮೇಲಿ ? ಮನಸ್ಸಿಗೆ ಬೆಂಕಿ ಹಾಕ್ಲಿ ಮರ್ಯಾದೆ ಮೊದ್ಲು !! ನೋಡೇ ಬಿಡೋಣ ಇದರ್ಗಲಾಟೇನ ಹೋಗ್ಬಾ (ಸುಬ್ಬು ನಿಷ್ಕ್ರಮಿಸಲುದ್ಯುಕ್ತನಾಗಲು) ತಡಿ, ಒಂದು Drink ಕೊಟ್ಹೋಗು. (ಸುಬ್ಬುವು ಬ್ರಾಂಡಿಯನ್ನು ಹಾಕಿ, ಸೋಡಾವನ್ನು ಸೇರಿಸುತ್ತಿರುವ ಗಾಜನ್ನು ಕಸಿದುಕೊಂಡು) ಹೋಗ್ಬೇಗ....ಎಲ್ಲಿಂದ್ಬರತ್ರೋ ... ತಿಳ್ಕೊಂಡು ... ಎಷ್ಟಾಗಿದೆಯೋ . ಆಗೋ ಗಲಾಟೆಯೆಲಾ ಇಲ್ಲಾಗ್ಲೀ . ಒಳಗೆ ಹೊರಗ್ಬೇಡ .. ಹೋಗಿ ಕರ್ಕೊಂಡ್ಬೋ, ಎಳಕೊಂಡೋ, ಹೊತ್ಕೊಂಡೋ ಹೇಗಾದ್ರೂ ಭೇಗ್ಬಂದ್ಸೇರು ಏನ್ಹೇಳಿದ್ರೂ ..ನೀನ್ ಹೇಳ್ದಾಗೆ ದೊಡ್ಡ ಮನುಷ್ಯರು....ಅಲ್ದೆ ದೊಡ್ಡ ಕುಟುಂಬ.

[ಸೂಳೆಯು ಗಾಜನ್ನು ಖಾಲಿ ಮಾಡುತ್ತಲೇ ಸುಬ್ಬುವು ನಿಷ್ಕ್ರಮಿಸುವನು].

ಸೂಳೆ ಅಬ್ಬಾ ! ... ಸೋಡಾ ಆಗ್ಹೋಯ್ತೋ ! ... ಅನ್ಯಾಯ Strongoo! ಇದೇ ಸುಬ್ಬು "ಹೋಪ್ಲೆಸ್ಸೂ" ಅನ್ನೋದು . Drinkಉ ಅಂದ್ರೆ Drinkಉ! Double Drink ಅಲ್ಲಾ ಎಂದೂ ಇಲ್ಲದ್ ತಲೇ ಭಾರ ತೂಗ್ತಾತ್ತೆ ನನ್ಮಲೇನ [ನಿಶ್ವಾಸಿಸಿ, ಪಕ್ಕದಲ್ಲಿರುವ ಟೀಪಾಯಿನ ಮೇಲಿನ ಬೆಳ್ಳಿ ಸಿಗರೇಟ್ ಕೇಸನ್ನು ಬಿಚ್ಚಿ, ಸಿಗರೇಟನ್ನು ಬಾಯಲ್ಲಿಟ್ಟು, ಕೇಸಿನಪಕ್ಕದಲ್ಲಿರುವ ಲೈಟರಿನಿಂದ ಹಚ್ಚಿ, ಕೊಂಡು ಹೊಗೆಯನ್ನು ಸೂರಿಗೆ ಬಿಡುತ್ತಾ ಸೋಫಾವಿನ ಬೆನ್ನಿಗೆ ಪುನಃ ಒರಗಿಕೊಳ್ಳುವಳು ]

[ಪ್ರವೇಶ ದ್ವಿತೀಯ ವಿಟ, ಐವತ್ತುನಾಲ್ಕು ವರುಷ ವಯಸ್ಸು ಪ್ರಮುಖ gazetted ಆಫೀಸರು.]

ದ್ವಿ. ವಿ. : (ಬೆನ್ನಿನ ಮೇಲೆ ಕೈಹಾಕಿ, ಆಸರೆಯನ್ನು ಕೊಡಲು ಯತ್ನಿಸುತ್ತಿರುವ ಸುಬ್ಬುವನ್ನು ಒದರಿ) Do you think I am drunk? Silly ass ಒಂದ್ಸಾರ್ತೀಗ್ ಮರೀಬೇಡ ಉಳೋನ್ ನೇಗಿಲ್ಮೇಲೂ ನಡೆಯೋನ್ ತೋಳಿನ್ಮೇಲೂ ಕೈಹಾಕ್ಬೇಡ (ಪ್ರವೇಶಿಸಿ) Good evening beauteoush creature (ನಾಲ್ಕು ಹೆಜ್ಜೆಗಳಿಂದ ಹಾಯುಬೇಕಾದ, ಹೊಸಲಿನಿಂದ ಸೂಳೆ ಕೂತಿರುವ ಸೋಫಾವನ್ನು ಎರಡೇ ಹೆಜ್ಜೆಗಳಲ್ಲಿ ಹಾದು) ಕೋಪಿಸ್ಕೋಬೇಡ . ಲೇಟ್ houroo ನನಗ್ಹೋತ್ತು ಒಂದ್ Huggoo! ಒಂದು kissoo (ಜೋಬಿನಿಂದ ಒಂದು ಕಟ್ಟು currency ನೋಟುಗಳನ್ನು ಟೀಪಾಯಿನ ಮೇಲೆ ಬಿಸುಟು) Eight hundred rupees minus twenty percent, ನಿನ್ನ ಕಮಿಷನ್ನು . . balance familyದು.

ಸೂಳೆ (ಥಟ್ಟನೆದ್ದು ಸೋಫಾವನ್ನು ಬಿಟ್ಟು ವಿಟನಿಂದ ನಾಲ್ಕು ಹೆಜ್ಜೆ ಆಚೆ ನಿಂತು) ಕಮೀಷನ್ನಂತೆ ! ಕಮೀಷನ್ನೂ ಬೇಡಾ, ನೀವೂ ಬೇಡಾ, ನಿಮ್ಮ Family ದುಡ್ಡದೋಚ್ಕೊಳ್ಳೋ ಹಾಗೆ ನಿಮಗ್ನಾನೂ ಬೇಡಾ........(ಥಟ್ಟಯಾಗಿ) ಸುಬ್ಬೂ ...(ಪ್ರವೇಶಿಸುವನು)

ಈ ಕಟ್ಟು ನೋಟ್ನ ಡ್ರೈವರ್ ಕೈಲಿ ಎಣಿಸಿಕೊಟ್ಟು ರಸೀತಿ ತಕ್ಕೊಂಡು ಫೌಂಟನ್‌ಪೆನ್ ಟೇಬಲ್ ಮೇಲಿದೆ ಈ ಪ್ರಾಣೀನ್ನೂ ಕಾರಲ್ಲಾಕಿ ಸಾಗ್ಸು

ದ್ವಿ ವಿ ಇದೇನ್ Dear ಇಷ್ಟು ಕೋಪ? . ನಾನು ಬಂದದ್ದು ನನ್ನ 'night off" ಇದು . ಮೆಮ್ ಸಾಹೆಬ್ understands ಈಗ hundred and sixty ಆದ್ರೂನೂವೆ ಮುಂದಕ್ಕೆ more ಆಗುವ ನನ್ನ Tributeನ ನಿನ್ನೊಪ್ಪೋಕೇ ಬಂದ್ನಾನು

ಸೂಳೆ ಹಯ್ಯಯ್ಯೋ! ನನಗ್‌ಸೀಪ್ರೊಪ್ಪೋ ಕಾಣ್ಕೇನ ಮನಃಪೂರ್ತೀ **ನಾಳೆ** ಮಟ್‌ಮಟ್ ಮಧ್ಯಾಹ್ನದಲ್ಲಿ ಒಪ್ಸಿದ್ರೇ ನನಗಿಷ್ಟ ಸಧ್ಯ ನಿಮ್ಮೀ ಸ್ಥಿತೀಲಿ, ನಿಮ್ಮ ಮಾತ್ರ ಸುಲ್ಕೊಳ್ಳೋಕೆ ಸುಬ್ಬು! ರಾಯರ್ಗೆ Drink ಕೊಡೋ (ಸುಬ್ಬು ಹಾಗೇ ಮಾಡುವನು. ವಿಟನು ಒಂದೇ ಗುಟುಕಿನಲ್ಲಿ ಖಾಲಿಮಾಡಿದ ಗಾಜನ್ನು ದಪ್ಪ ರತ್ನಗಂಬಳಿ ಹಾಸಿರುವ ನೆಲಕ್ಕೆ ಬಿಟ್ಟು)

ದ್ವಿ. ವಿ That is all right, Subbu glass ಒಡದ್ರೆ put it down to me .ನೋಡು dear ನೀನೂ gentlemanoo ನಾನೂ gentlemanoo ಇಷ್ಟು ಕೋಪಾ ಇದ್ರೂವೆ ನನ್ನ ಟ್ರೀಲಿ First offer your enemy a drink Then damn him ! ಅದು shportಉ.... ಈ shportನ ನನ್ನ wifeಗ್ನಾನ ನೀನು ಹೇಳ್ಕೊಡೋದಾದ್ರೆ at thousand rupees a minute, I'll bless you for ever and ever and over [ಎನ್ನುತ್ತಾ ತನ್ನ ಹಿಂದೆ ಸಿದ್ಧವಾಗಿ ಹರಡಿರುವ ಸುಬ್ಬುವಿನ ಬಾಹುವಕ್ಷಗಳ ಮೇಲೆ ಒರಗಿಕೊಳ್ಳುವನು.]

ಸೂಳೆ: [ನಯವಾಗಿ ಹತ್ತಿರ ಬಂದು ನೋಟುಗಳ ಕಟ್ಟನ್ನು ವಿಟನ ಕೋಟಿನ ಒಳಜೇಬಿಗೆ ಸೇರಿಸಿ, ಆತನ ಗಲ್ಲವನ್ನು ಚಿವುಟುತ್ತಾ,

ಅವನನ್ನು ಮೃದುವಾಗಿ ತನ್ನ ಬಾಹುಗಳಿಗೆ ವರ್ಗಾಯಿಸಿ, ಮೆಲ್ಲನೆ ಬಾಗಿಲ ಕಡೆ ಎಳೆಯುತ್ತಾ] ಮನೇಗ್ಹೋಗಿ, ಈ ಸ್ಪೋರ್ಟ್ಸೂ ..ಈ ಲೆಕ್ಚರ್ರೂ . ಇವಕ್ಕೆಲ್ಲಾ ತುಂಡ್ಹಾಕಿ . ಮಲಗಿರೋ ಮಕ್ಕಳ್ನೆಬ್ಬಿಸ್ದೆ ಮನೇ ಆರ್ಕೇನೂ ರೇಗಿಸ್ದೇ ತೆಪ್ಗೆ ಹೋಗಿ ಮಲಕ್ಕೊಳ್ಳೋದಾದ್ರೆ .. .ನೀವು next time ಬರೋವಾಗ ...ಹಗ್ಗೂ .ಕಿಸ್ಸೂ ಅಂದ್ರಲ್ಲಾ ಆ ಮಾತೆತ್ತ್ಬಹುದು ಇದು ನನ್ನ ಜೆಜ್‌ಮೆಂಟು! ಅಪೀಲಿಲ್ಲ ಸುಬ್ಬೂ! (ಸುಸ್ತಾಗಿ ತನ್ನ ತೋಳಿನ ಮೇಲೆ ಒರಗಿದ ವಿಟನನ್ನು ಸುಬ್ಬುವಿಗೆ ವರ್ಗಾಯಿಸಿ) ನಾನ್ಹೇಳಿದ್ದೆಲ್ಲಾ ಕಿವೀಗ್ಬಿತ್ತೇ? ಮೆದಳ್ಗೇರ್ತೇ? ಇಲ್ಲಾ "ಡ್ರಂಕೂ"ಂತಾರಲ್ಲಾ ಅದೋ ನೀವು ?

ದ್ವಿ. ವಿ · Drunkಊ ? . ನಾನು ? ಸುಬ್ಬೂ! (ಸುಬ್ಬುವಿನ ಕೊರಳನ್ನು ತನ್ನ ಕೈಯಿಂದ ಬಿಗಿಯುತ್ತಾ) ಸುಬ್ಬು ಲೇ! Sweet heart ಕಾಣೋ ನೀನು ನನಗೆ! (ಸುಬ್ಬುವನ್ನು ಅಪ್ಪಿಕೊಳ್ಳುತ್ತಾ ಅವನ ಗಲ್ಲವನ್ನು ಎತ್ತಿ) ನೀನ್ಹಾಗ್ನ ಗರ್ಲಾಗಿದ್ದಿದ್ದರೆ Kiss ಮಾಡ್ತಿದ್ದ್ನೋ ನಿನ್ನ honestಓ ನೀನು ನೀನೇ ಹೇಳೋ . .ಸತ್ಯವಾಗ್ಹೇಳೋ Drunkಏ ನಾನು? ಸತ್ಯವಾಗ್ಹೇಳೋ, ಕುಡಿದಿದೇನೇ ನಾನು?

ಸುಬ್ಬು · ಇದೇನ್‌ಪ್ರಶ್ನೆ ಸಾರ್ ?

ದ್ವಿ. ವಿ.: ಮತ್ತೆ್ಹೇಳ್ತಾಳಲ್ಲಾ! This beautiful but cruel creature ಊ ?!

ಸುಬ್ಬು : ಏನ್ಸಾರ್ ಇದೂ? ನೀವೂವೇ, ಇಷ್ಟ್ ತಿಳ್ದೋರು . ........ಹೆಂಗ್ಸ್ರು ಮಾತ್ನ ಕಟ್ಕೊಂಡು! (ತೆರೆಯ ಹಿಂದೆ ಕಾರ್ Start ಆದ ಶಬ್ದ) Caroo! Startoo! [ಮುಂದೆ ಚರ್ಚಿಸುವ ಅವಕಾಶಕೊಡದೆ ಕೊಂಡೊಯ್ಯುತ್ತಾ ನಿಷ್ಕ್ರಮಿಸುವನು.]

ಸೂಳೆ (ಹಿಂದಕ್ಕೆ ಬಂದು ಸೋಫಾವಿನ ಮೇಲೆ ಕುಸಿಯುತ್ತಾ) ಅಬ್ಬಾ! ಬದಕ್ದೆ!

ಸೂಳೆ ತಾಯಿ (ಮುಂಚಿನಿಂದಲೇ ಹಿಂದಿನ ಬಾಗಿಲಿನಿಂದ ಹೊಂಚು ನೋಡುತ್ತಿದ್ದು, ಕೇಳುತ್ತಿದ್ದು ಈಗ ಪ್ರವೇಶಿಸಿ) ಇದೇನ್ ಬುದ್ಧಿ ಇಲ್ಲವ್ವದ್ಕು ನಿಂದೂ? ಬಂದಾತ ನೋಟ್ಗಳ ಕಟ್ಕಟ್ನೇ ಮೇಜಿನ್ಮೇಲೆ ಕುಕ್ಕಿ, "ಎಣಿಸ್ಕೊ ನಿನ್ನ ತಿಂಗಳಗಟ್ಲೇ ಮಾಮೂಲ್‌ನಾ" ಅಂತಾತ್ನೇ ಅಂದ್ಮೇಲೇ ಕುಡದ್ ಮಂಕ್ತನ್ದಲ್ಲಿ ಒಂದ್ನೋಟ್ನೊ ಹಿಂದಿಟ್ಕೊಳ್ದೇ ಆತನ ಜೋಬ್ಗೇ ತಿರಿಗ್ನೇರ್ಸಿ ರವಾನಿಸ್ಬಿಟ್ಟ್ನವ್ನನ್ನೆಲ್ಲಾ ಮತ್ತ್ಬಿಟ್ಟು "ಬದಕ್ದೇ"ಂತ ಬಿದ್ಕೊಂಡಿದ್ದೀಯಲ್ಲಾ ಇದೇನ್ ಬುದ್ಧೀನೇ ನಿಂದೂ?

ಸೂಳೆ (ತಾತ್ಸಾರದಿಂದ ನಗುತ್ತಾ) ಅವ್ಮ್ಮಾ, ನಿನ್ಲ ಕ್ವಾಚಾರ ನಿನ್ಕಾಲದ್ದು! ಕೈಗ್ಬಂದದ್ನ ಕಸ್ಕೊಂಡು ಬಂದೋರ್ನ ಸಾಗ್ಸೋದು ನಿನ್ಕಾಲದ ರಕ್ಮು! Up-to-date ಅಲ್ಲ! ಬರೋವ್ನ ಅಂತಸ್ತ್ನೇ ಅರೀದೆ ಈಗ್ಲೆ ಗಿಟ್ಸೋ ನೂರರ್ವತ್ ರುಪಾಯ್ನ ಬಿಟ್ಟು ಈ ಮನುಷ್ಯ, ಮನೇ ಸೇರಿ ನಾಳೆ ಜೆಳಿಗ್ಗೆ ಜೋಬ್ನಲ್ಲಿರೋ ದುಡ್ಡೆಣಿಸ್ಕೊಂಡು "ಈ ದುಡ್ಡೆಲ್ಲಾ ನೂವೇ ನಿನ್ನೆ ರಾತ್ರಿ ಹೋಗ್ಬಿಟ್ಟಿರ್ಬೋಹ್ದಾಗಿತ್ತು. ಆದ್ರೆ ಡ್ರಿಂಕ್ನೂ ಕೊಟ್ಟು, ಒಂದು ಬಿಡ್ಗಾಸ್ನೂ ಕಸ್ಕೊಳ್ದೇ ಮರ್ಯಾದೆಯಾಗಿ ಕಳ್ಸಿದ್ಲಲ್ಲಾ" ಅಂತ ಯೋಚ್ಸಿ, ಆದೇ ಯೋಚ್ನೇಲಿ ಅದೇ ತಿಂಗಳ್ಮಾಮೂಲ. ನೂರೂ ಚಿಲ್ಲ್ರೇನ ಇನ್ನೂರಕ್ಕೆ ಭರ್ತಿಮಾಡಿ ಕಳ್ಸೋಹಾಗೆ ಮಾಡೋ ದಾರಿ ನನ್ದು!!

ಸೂಳೆ ತಾಯಿ ಸರ್ಸರಿ! ಈ ನಿನ್ನ ಜಂಬಾನ ನಿನ್ನ ಕುಡಿದ ಮಂಕ್ತನದಲ್ಲಿ, ನೀನೇ ಮೆಚ್ಕೋಬೇಕೆ ಹೊರ್ತು ನನ್ನ್ ಕಸ್ಬಿನ್‌ತಿರುಳ್ನ ನನ್ಗೆ ಬ್ಬೇಲ್ಬುಟ್ಟದ ನೀನ್ಹೇಳ್ಕೊಡ್ಬೇಕೆ? ನನಗೆ? .....

**ಸೂಳೆ** (ತಾತ್ಸಾರದಿಂದ ತುಟಿಗಳನ್ನು ವಕ್ರಿಸಿ) ರೇಗಿಸ್ಬೇಡಾ! (ಹಲ್ಲುಗಳನ್ನು ಬಿಗಿದು) ದಮ್ಮಯ್ಯಾ ರೇಗಿಸ್ಬೇಡಾ! ಕುಡದ್ಮೇಂಕ್ತನಾಂದ್ಯಲ್ಲಾ! ಕುಡಿಯೋದು ಕಲಿಸಿದ್ದ್ಯಾರೂ? (ತಾಯಿ ಮು ತಲೆ ಬಾಗುವಳು) ಆಗ ಚಿಕ್ಬುಡ್ಗಿ ನಾನು ಕುಡ್ದು ದಿಗ್ದೇಶಾನೂ ತಿಳೀದೇ ಗಂಡಸ್ತನಾನೂ ಮರ್ತು ನನ್ಮೇಲೆ ಬೀಳೋಕೆ ಬಂದ ನಿನ್ನ ಹಾಳು ಗಿರಾಕಿಗಳೊಂಸ್ರೆ ನನಗೆ ಅಸಹ್ಯ ಇದ್ನಲ್ಲಾ ಮರ್ಸಿ ಆಸ್ಪತ್ರೇಲಿ, ಆಪರೇಷನ್‌ಗೆ Chloroform ಕೊಡೋ ಹಾಗೆ ನನ್ಬಾಯ್ಲಿ ಹಟಾತ್ತಾಗಿ ಸುರೀತಿದ್ದ ಕುಡಿತಾನ್ನೇ ಈಗ ಬೈತಿಧೀಯಲ್ಲಾ ನೀನೇನ್ ಹೆಂಗ್ಸೇ? ನನ್ನೊಬ್ಬತ್ತವ್ರು ಹೆತ್ತವ್ರು ಹೊತ್ತ್ಬುತ್ತದ್ನ ಮರ್ತು ನಿನ್ನೊಬ್ಬಟ್ಟೆ ತುಂಬ್ಸ್ಕೊಳ್ಳೋಕೆ ಹೆತ್ಮಕ್ಳನ್ನ ಹೂದರಕ್ಕೆ ತುತ್ತಾಗಿ ಕೊಟ್ಟೆ ರಾಕ್ಷಸೀ! [ದ್ರಾವಕದ ಉದ್ರೇಕದಿಂದ ಎದ್ದು ನಿಂತು, ಮುಷ್ಟಿಗಳನ್ನು ಬಿಗಿದು, ಅಮ್ಮನನ್ನು ಸಮೀಪಿಸುತ್ತಾ] ರಾಕ್ಷಸೀ! ಹೆಂಗ್ಸಲ್ಲ ನೀನು!! ಕಿರಾತೀ! (ಥಟ್ಟನೆ ಮುಷ್ಟಿಗಳನ್ನು ಸಡಿಲಿಸಿ ಎಡಹಸ್ತದಿಂದ ಮುಖವನ್ನು ಸವರಿಕೊಳ್ಳುತ್ತಾ) ಸುಬ್ಬೂ! (ಘಟ್ಟಿಯಾಗಿ) ಸುಬ್ಬೂ! (ಓಡಿಬಂದ ಸುಬ್ಬುವಿಗೆ) ಅವ್ಳ್ಮರೇಗಿಸ್ತಿದಾಳ್ನನ್ನಾ ಈಗೇನು ಮುದಕ್ರೊತಾಳೋ ಅವಳ್ಮೇಲೇಲಿ, ಇಲ್ಲಾ ಅವಳ್ನ ಈಕ್ಷಣ ಈ ಮನೆಯಿಂದ ಒದ್ದೋಡಿಸೋದು ನ್ಯಾಯವೋ ಅನ್ಯಾಯವೋ ಬೇಗ ನಿರ್ಧರಿಸು . ಈ ಮನೆ ಕೊಂಡ್ಕೊಟ್ಟ ನೀನೇ ನಿರ್ಧರಿಸು !

**ಸೂಳೆ ತಾಯಿ** (ಸೂಳೆಯನ್ನು ಸಮೀಪಿಸಿ, ಭುಜವನ್ನು ಸವರುತ್ತಾ) ಇದ್ಯಾಕ್ ಕಂದಾ, ಹೆತ್ತೋಳ್ಮೇಲೇ ಹೀಗ್ರೇಗ್ತೀಯಾ? . (ಸೂಳೆಗೆ ಮತ್ತೊಂದು Drinkಅನ್ನು ಕೊಡಲು ಸುಬ್ಬುವಿಗೆ ಸಂಜ್ಞೆಮಾಡುವಳು).

**ಸೂಳೆ :** (ಒಂದೇ ಗುಟುಕಿನಲ್ಲಿ ಖಾಲೀಮಾಡಿ ಗಾಜನ್ನು ನೆಲಕ್ಕೆ ಬಿಟ್ಟು) ಏನನ್ಯಾಯ ಅಂತೀಯ ಅಮ್ಮಾ? .. .(ತಾಯಿಯನ್ನು ಸೋಫಾವಿಗೆ ತಳ್ಳಿ ತಾನು ಪಕ್ಕದಲ್ಲಿ ಕುಳಿತುಕೊಂಡು) ಈಗ್ಲೋದ್ನಲ್ಲಾ

ಪ್ರಾಣಿ ದೊಡ್ಡು ಕುಟುಂಬಾಸ್ತಾ! ಮಹಾಲಕ್ಷ್ಮಿ ಇದ್ದದ್ದು ಸುಳ್ಳಿದ್ರೂ ಈತ್ನ ಹೆಂಡ್ತಿ ಇರೋದು ದಿಟ! ಎಂಟು ಮಕ್ಳು ಹೆತ್ತಿರೋದು, ಮೂವತ್ತ್ಹ್ಯಕ್ಕೂಡಾ ಇಲ್ಲ ವಯಸ್ಸು ಆಕೇಗೆ! ಇವನ್ಗಲಾಟೇಲಿ ತಲೆ ತುಂಬ ಯೋಚ್ನೆ! ಅರ್ಥ ಕೊದಲ್ ನರ್ತಿದೇ ಅವ್ಮ್ಮಾ! ಇವ್ನು ಮನೆ ಸೇರಿ, ಈ ಸ್ಥಿತೀಲಿ ಒಂದ ಗ್ಲಾದ್ರೂ ಬಾಯ್ಗ್ ಹಾಕ್ಕೊಳ್ಳೋವರ್ಗೂ ಜಲಪಾನ ಕೂಡ ಇಲ್ದೆ ಮಧ್ಯಾಹ್ನ ಉಂಡ್ಹೊಟ್ಟೇನ, ಇದ್ವರ್ಗೂ ಉಪವಾಸ ಹಾಕ್ಕೊಂಡು ಗಂಡ ಉಂಡ್ಮೇಲೇನೇ ಊಟಾಂತ ಕಾದಿರುತ್ತೆ ಆ ಮಹಾಪ್ರಾಣಿ ಇದೋ ಬಂಗ್ಲೆ ಮುಟ್ಟುತ್ಲೂವೇ ಕೋರ್ಟಲ್ಲೋ ಕಚೇರೀಲೋ ಆಟ್ದಲ್ಲೋ ಇಲ್ಲಾ ಇಲ್ಲೋ ಆದ ಅನಾನ್ಕೂಲಗಳ್ನೆಲ್ಲಾ, ತನ್ನಂಬ್ಕೊಂಡು ಬಂಗ್ಲೇಲ್ಬಿದ್ದಿರೋ ಒಬ್ಬೊಬ್ಬ್ರ ಮೇಲೂ ಹೆಂಡ್ತಿ, ಮಕ್ಳು, ಮರಿ, ಆಳಿಯು, ಸೊಸೆ, ಜವಾನ, ಜಾಡಮಾಲಿ ಕೊನೆಗೆ ಮುಸ್ರೆ ತಿಕ್ಕೋಳ್ನೂ ಬಿಡದೆ, ಎಲ್ಲ್ರನ್ನೂ ಎಬ್ಸಿ, ಒದ್ದೋ ಬೈದೋ—ಅಂತೂ ಈ ಕೋಪ ಕುಡ್ತಗ್ಬರೋ ಇಳಿಯೋವರ್ಗೂ ಭೂಕಂಪದ್ಹಾಗೆ ಮನೇನೆಲ್ಲಾ ನಡಗ್ಸಿ, ತಾನೂ ಸುಸ್ತಾಗಿ ಬಿದ್ಕೊಳ್ಳುತ್ತೆ ಇದ್ನೆಲ್ಲಾ ಒಂದೊಂದಿನಾನೂ, ಒಂದೊಂದ್ರಾತ್ರೀನೂ ತಪ್ದೆ, ನೋಡೀ ನೋಡೀ ತಡ್ಡೂ ತಡ್ಡೂ ಇದ್ಕೋ ಹ್ಯಾಗಿದ್ರೂ ನೂವೇ ತನ್ನ ಮರ್ಯಾನ ತಾನು ಕಾಪಾಡ್ಕೊಳ್ತಿರೋ ಇವನ್ಹೆಂಡ್ತಿ

ಕ್ಷಮೇಂತಾರಲ್ಲಮ್ಮಾ ಭೂದೇವಿ ಯಾವ್ಮ್ಮಾಲೇ? ಸುಬ್ಬೂ! ಎಲ್ಲಿದ್ದೀಯೋ? ಡ್ರಿಂಕೋ! (ಥಟ್ಟನೆ ಸುಬ್ಬುವು ಒದಗಿಸಿದ ದ್ರಾವಕವನ್ನು ಕುಡಿದು, ಗಾಜನ್ನು ಸುಬ್ಬುವಿನ ಕೈಗಳಿಗೆ ಜಾರಿಸಿ) .. .ಆದ್ರೂನೂವೆ ಅವ್ಮ್ಮಾ . ಹೇಳ್ತೀನಿ .. .ಈಗರ್ತಿಯರ್ಗ್ ಎಷ್ಟ್ಜಂಭಾಂತೀಯಾ? ಇಷ್ಟಕ್ಕೂ ಮೂವತ್ತ್ರಟ್ಟೋಕ್ಮುಂಚೆ ಎಂಟು - ಹತ್ತು ಮರೀಹಾಕಿ ಮೂತಿ ಮೈಯೆಲ್ಲಾ ಉಬ್ಬಿ, ಅಕ್ಕಿ ಮೂಟೇ ಮೇಲ್ಲುಂಬ್ಗೆ ಕವಿತ್ಹಾಗೋ . ..ಇಲ್ಲ ಹೊತ್ತೂ, ಹೆತ್ತೂ, ದುಡ್ಡೂ, ದುಡ್ಡೂ, ಕುಗ್ಗೀ ಕುಗ್ಗೀ ಹಂಚೀಕಡ್ಡಿಗೆ

ಸೀರೆ ಸುತ್ತಿದ್ದ್ಹಾಗೆ ಒಣ್ಗೀ ಹಲ್ಲೀ ಹಾಗಿರೋದಲ್ಲ್ದೆ ತಲೆಯೆಲ್ಲಾ
ನರ್ತು ಕಣ್ಗ್ಳು ಆಳಾಳುದ್ದ ಇಳ್ದು ಇಲ್ಲಾ ಮೂತಿಯೆಲ್ಲಾ
ಉಬ್ಬಿ, ಗಲ್ಲದ್ತಳಗೆಲ್ಲಾ ನಾಲ್ಕು ಗಲ್ಲಗ್ಳೂ ಜೋಲಾಡ್ತಾ
ಮದ್ವೆ ಆದ್ದಕ್ಕೆ, ತಬ್ಕೊಂಡ್‌ಮುತ್ತಿಟ್ ಸಾಕೋಕೆ ತನ್ಹೊಟ್ಟೇಲಿ
ಒಂದ್ ಮಗೂನೂ ಹೆರ್ದೀನೇ ಆನೇ ಹಾಗೆ ವಾಲಾಡ್ತಾ ಇರೋ
ಈ ಗರ್ತೀರ್ಗೆ ನಮ್ಮೇಲಿರೋ ತಾತ್ಸಾರಾ ನಗೂ ಬರತ್ತೇ
ಅಮ್ಮಾ . ಗರ್ತಿ ಏನೂ ಸೂಳೆ ಏನೂ ಹೆಂಗ್ಸ್ಹೆಂಗ್ಸೇ
ಹೆಣ್ಣ್ಹೆಣ್ಣೇ ಹುಲಿಯಾಗ್ಲೀ ಹಂದಿಯಾಗ್ಲೀ ಕೋತಿಯಾಗ್ಲೀ
ಕಿರುಬನಾಗ್ಲೀ ಹೆಣ್ಗ್ ಇಷ್ಟ್ವದ್ರೀನೆ, ಗಂಡು ಹತ್ರಾ ಬಂತೋ
ಇಷ್ಟ್ವಲ್ಡಾಗ ಹಚಾ ! ಈಗರ್ತೀರ್ಹಣೇಬರಹಾ (ನಸುನಗುತ್ತಾ)
ಹೆಣ್‌ಮೃಗಗಳ್ಗಿಂತ ಬೀಳು ! ತನ್ಹೊಟ್ಟೇಗೆ ಕೂಳ್ಗ್ಹಾಯ್ದು
ತನ್ಮೈಮುಚ್ಕೋಕೆ ಬಟ್ಟೇನೊದಗ್ಸೋ ಗಂಡ್ಸಿನ್ಕೈಲಿ ಸಿಕ್ಕೊಂಡು
ತನ್ನವಸ್ಥೆ ತನಗೇನೇ ತಿಳೀದೆ ನರಳ್ತಿದ್ರೂನೂವೆ, ತಾನು .
ನಮ್ಮಗ್ಳ್ಹಗಲ್ಲಾಂಬೊ ಜಂಭ ಗರ್ತೀರ್ದು ಒದ್ಲೋಡ್ನೋ
ಥಾತಿ ನನ್ಗಿರೋದು. (ಪಕಪಕನೆ ನಗುತ್ತಾ) ಒದ್ಲೋಡ್ನೋ ಥಾತಿ
ನನಿಗಿರೋದು ನನ್ಜಂಭಾ ಈ ನಮ್ಮಿಬ್ರ ಜಂಭ್ಗಳಲ್ಲೀ
ಗರ್ತೀನ್ರೂ, ಸೂಳೇನ್ರೂ ಗೊಂಬೆಗ್ಳ್ಹಾಗೆ ನಮ್ಮಿಬ್ಬರ್ನ್ನೂ
ತನ್ಸುಖಕ್ಕೆ ಆಡಿಸ್ತಿರೋ ಅನ್ಯಾಯ ಪಾಪಿ ಗಂಡ್ಸಂಬೋನು
ಮೃಗಕ್ಕಿಂತ ಬೀಳಾದ ಪ್ರಾಣೀಂಬೋದ್ನ ತಿಳೀದೆ ನಾವ್ನಾವೆ
ನಮ್ಜಂಭದಲ್ಲಿ ಹೋರಾಡ್ತಾ ಇರೋದು ಅವತ್ನೋ
ಡೂಮ್ಮಾ ಸುಬ್ಬೂ ! ಜ್ಞಾಪಕ್ವೇ ? ವ್ಯಾಟ್ನೇನೋ !
ಮೂರ್ರೂಪಾಯಿ ಟಿಕೆಟ್ಟೊಮ್ಮಾ ನನಗೆ ಸುಬ್ಬೂ ಅವನ ಹಳೀ
Navy Blueನೋ ಅದೆಂಥಾದ್ದೊ ಕೋಟ್ನಾ ಹಾಕಿ, ಮೂರ್‍ರು
ಪಾಯಿ ಟಿಕೀಟ್ನಲ್ಕುಕ್ಕರ್‍ಸಿ ನಾಟ್ಕಕ್ಹೋದ್ವಿ . . ನನ್ಸೀಟು ರಿಸರ್‍ವ್
........ಮ್ಯಾನೇಜರ್‍ಮೆಂದ್ಬಂದು ತೋರಸ್ದಾ ಸೀಟ್ನ ನನಗೆ........
ಮೊದಲ್ನೇ ಸೀಟೂಮ್ಮಾ .ಎಲ್ಲರ್ಗಿಂತಾ Stageಗೆ ಹತ್ರಾ !. ..
ಹೋಗ್ತೀನೆ ಕೂತ್ಕೊಳ್ಳೋಕೆ .... ತಿರಗ್ದೆ ... ಏನ್ಹೇಳ್ಲೀಮ್ಮಾ ! ..

ಎಡ್ರೂರ್ಪಾಯ್ಸೀಟ್ನಲ್ಲಿ ನೆನೆಷ್ದ ಅರಳೀಪೇಟಿ ಉಟ್ಕೊಂಡು ತುರುಪಿಸೋಲಿ ಇಟ್ಕೊಂಡು ಕೂತಿದ್ದಾಳೆ! ಯಾರೂಂತೀಯಾ? (ತನ್ನ ಕುತ್ತಿಗೆಯಲ್ಲಿರುವ ಸೀಮೆ ಕಮಲ ವಜ್ರದ ಶರಡನ್ನೂ, ಮೂಗಿನ ಮೇಲೆ ಪ್ರಜ್ವಲಿಸುವ ಮೂಗುತಿ ಬೇಸರಿಗಳನ್ನೂ ಬಲಗೈ ಮುಂಬೆಟ್ಟಿನಿಂದ ಸೂಚಿಸಿ) ಇವ್ರ್ಯಾಬ್ತು!! ಹೊಟ್ಟೆ ಉರೀ ತೂವಮ್ರಾ ನನಗೇನೇ ಹ್ಯಾಗಿದ್ರೂ ನೂವೆ "ಪತ್ನೀ ಪತ್ನೀನೇ! ಉಪಪತ್ನಿ ಉಪಪತ್ನೀನೇ" ಅನ್ಕೊಂಡು ಮ್ಯಾನೇಜರ್ಗೆ "ಇಲ್ಲಿಲ್ಲಾ ಆಕ್ಟರ್ ಪೌಡರ್ ಕಾಣ್ಸತ್ತೆ ಟಿಕೆಟ್ ಪರ್ಸ್ನಾಗಿಲ್ಲಾ ಆ ಒಂದ್ರುಪಾಯಿ ಸೀಟ್ನತ್ರ ಈ ಕುರ್ಚೀನ ಹಾಕಿಸ್ಬಿಡೀ"ಂತ ಈಕೆ ಮರ್ಯಾದೆ ಕಾಪಾಡೋಕ್ಕೋಂ? ನಾನು ಹಿಮ್ಮೆಟ್ಕೋಸ್ಬ್ಯಲ್ಲೇವಮ್ಮಾ! . ಎಲ್ರಿಗೂ ಕೇಳಿಸ್ಲೀಹಾಗೆ ಆ ಮೂಗುತ್ತಿ ಇಲ್ಲದ ಮೊಂಡ್ಮೂಗ್ನ ಸೂರ್ಗೆ ಎತ್ಕೊಂಡು ಉಸುರು ಹೀರ್ತಾ "ಇಂಥಾವರು ಹೀಗೆಲ್ಲಾ ಬರ್ತಾರೇಂತ ತಿಳಿದಿದ್ರೆ ಇಲ್ಲಿಗೆ ಬರ್ತಾ ಇರ್ಲಿಲ್ಲಾ"ಂತಾಳೇವಮ್ಮಾ

ಇಲ್ಲಾದ್ರೇನೂ ನನಗೆ ಹೇಳ್ಬೇಕೂಂತಿತ್ತು "ಇಂಥಾ ಜನರೇನು, ಅಂಥಾ ಜನರೇನು? ನಿನ್ನೀ ಹರಕ್ಲು ಅರಳೀಪೇಟಿ ಸೀರೇನಾ ನಿನ್ನ ಬೊಂಬ್ಳೀ ಮಾಸ್ ಮೈಯಿಗೆ ಚೊಕ್ಕೋತನ ಘಟಕ್ಕೆ ಸುತ್ತಿ, ನಿನ್ಮೊಂಡ್ಮೂಗಿಗೆ ಮೂಗ್ತೀನೂ ಇಲ್ದೇನೆ, ನಿನ್ನಾನೆ: ಕಿವೀಗೆ ಪುಷ್ಪರಾಗದ್ವೋಲೆ ಪೋಣಿಸಿ, ನಿನ್ನ ಪುಸ್ಲಾಯಿ ಸ್ತಿರೋ ಗಂಡ್ನೇ, ನಕ್ಷರತಾರಿ: ಸೀರೇನೂ, ನನ್ನೀಮೇ ಕಮಲದ ಜ್ಯೂಯಲ್ಸ್ನೂ ನನಗ್ಕೊಡ್ಸಿ ನನ್ನ ಕಾಲಿಗ್ಬಂದು ಬೀಳೋನೂ, ನಿನ್ನ ನನ್ನ ಟಿಕೆಟ್ಟಿಗೆ ದುಡ್ಡು ಕೊಟ್ಟೋನೂ ಅವನೇ" ಅಂತ ಒಡ್ಡ್ಯೇಳ್ಬಿಡೋಣಾಂತಾ ತೋಚ್ತೂವಮ್ಮಾ (ಪುನಃ ಶರಡನ್ನು ಮುಟ್ಟಿ ತೋರಿಸುತ್ತಾ) ಆದ್ರೇನ್ಮಾಡೋದು ಈತ್ನಪ್ಪಿಂದಿಧೇನೆ, ತಿನ್ನುತ್ಲೂ ಇಧೇನೆ ಇನ್ಮುಂದಕ್ಕೂ ತಿಂತೇನೇಂತ ಬಂಡ್ಕೋಪಾನ ಮೇಷ್ಟ್ರು ಹೆದ್ರಸ್ದ ಮಗುಹಾಗೆ ನುಂಗ್ಕೊಂಡು ತೆಪ್ಗೆ ಕೂತೇವಮ್ಮಾ, ನನ್ನ ಮೂರ್ರುಪಾಯಿ ಕೊಟ್ಟ

ಒಂದ್ರೂವಾಯ್ಸ್ನೇಟ್ನಲ್ಲಿ (Sofa ವಿನಲ್ಲಿ ಹಿಂದೊರಗುತ್ತಾ) ಯಾಕೋವ್ಮಾ. ಯಾವತ್ತೂ ಇಲ್ಲದ ಸುಸ್ತು ಇವತ್ತು (ತನ್ನೆರಡು ಕೈಗಳಲ್ಲಿ ತಾಯಿಯ ಕೈಯೊಂದನ್ನು ಮುಖಕ್ಕೆಳೆದು ಚುಂಬಿಸುತ್ತಾ) ನಮ್ಮವ್ಮಾ! ಊಟವಾಡಿದ್ರಾ? ಕೇಳೋ ದೇನೂ ಮಾಡೇ ಇರ್ತೀಯ (ತಾಯಿಯ ಕೈಯನ್ನು ಸುಡುವ ವಸ್ತುವನ್ನು ಒದರುವಂತೆ ಒದರಿ) ಅಬ್ಬ! ನಿಸ್ಸಣ್ಣೇಬರಹ ನೀನ್ಹೊಟ್ಟೆ ಹೂರ್ಕೊಳ್ಳೋದೇ! ಹೋಗ್ಮಲಕ್ಕ್ಕೋವ್ಮಾ ಸುಬ್ಬೂ ಸಾಗ್ಸು ಅಮ್ಮನ್ನಾ! ವಳ್ಳೇ ಜಿಗ್ಣ ಬಂದ್ಸೇಕೊಂಡ್ಳು (ಸುಬ್ಬುವು ಸೂಕ್ಷ್ಮವಾಗಿ ಅಸಮಾಧಾನಪಡುವ ತಾಯಿಯನ್ನು ಸಂಜ್ಞೆಗಳಿಂದ ಸಮಾಧಾನಪಡಿಸಿ, ಕರೆದುಕೊಂಡು ಕೋಣೆಯ ಬಾಗಿಲಿನಿಂದ ಒಳಕ್ಕೆ ತಳ್ಳುವನು.)

**ಸೂಳೆ** Time ಎಷ್ಟೋ ಸುಬ್ಬು?

**ಸುಬ್ಬು** Wrist-watch ಎನ್ನಿಂತ್ಹೋಗಿದ್ಯೋ? ಒಡೋದಿಲ್ವೇ?

**ಸೂಳೆ** ವಾಚೇನೂ ಓಡೋದು? ಕಡ್ಡ ನನ್ಕಣ್ಗೆ ನೀನ್ ಓಡೋ ಹಾಗಿದೆ (ಸಮೀಪಿಸಿದ ಸುಬ್ಬುವಿಗೆ) ಅನ್ಯಾಯ Drink ಓ (ಎನ್ನುತ್ತಾ ಮುಂದಿರುವ Dressing table ಅನ್ನು ಸಮೀಪಿಸಿ, ಕುರ್ಚಿಯ ಮೇಲೆ ಕುಸಿಯುತ್ತಾ) Ponds Cream ಓ (ಸುಬ್ಬುವು ಒದಗಿಸುವನು. ಸೂಳೆಯು ಕೈಯಿಂದ ಮುಖಕ್ಕೆ ಅಂಜನವನ್ನು ತೀಡಿ, ಇದುವರೆಗೂ ಹೇಮದಂತೆ ಜ್ವಲಿಸುತ್ತಿದ್ದ ಮುಖದ ನೈಸರ್ಗಿಕ ಕಪ್ಪು ತೊಗಲನ್ನು ತೋರ್ಪಡಿಸುತ್ತಾ, ಧಟ್ಟನೆ ಎರಡು ಬಾಹುಗಳೂ ಕುಸಿದುಬಿದ್ದು ತಲೆಯನ್ನು ಕುರ್ಚಿಯ ಬೆನ್ನಿಗೆ ಒರಗಿಸಿ ನಿಟ್ಟುಸಿರನ್ನು ಬಿಡುತ್ತಾ) ಸುಸ್ತೋ ಅನ್ಯಾಯ ಸುಸ್ತು ಸುಬ್ಬೂ! (ಸುಬ್ಬುವು ನಾಜೂಕಾಗಿ ಸೂಳೆಯನ್ನು ಸೋಫಾವಿಗೆ ಸಾಗಿಸಿ, ಮಲಗಿಸಿ, ಬಲಬಾಗಿಲಿನಿಂದ ನಿಷ್ಕ್ರಮಿಸಿ ಪುನಃ ಕೈಯಲ್ಲೊಂದು Oil cloth ಅನ್ನು ಹಿಡಿದುಕೊಂಡು ಪ್ರವೇಶಿಸಿ, ಅದನ್ನು ಸೂಳೆಯ ತಲೆಯ ಕೆಳಗೆ ಇಟ್ಟು, ಮೇಜಿನಿಂದ ಅಂಜನವನ್ನು ತಂದು

ಸೂಳೆಯ ಮುಖಕ್ಕೆ ಸವರಿ, ಮುಖದ ಬಣ್ಣವನ್ನು ತೆಗೆಯುತ್ತಲೂ, ಕೈಚಾಕದಿಂದ ಒಷ್ಟೇತ್ಯಾದಿಗಳನ್ನು ಒರಸುವನು).

ಸುಬ್ಬು ಇನ್ನೂ ಟಾ ಯಾವಾಗ ಮಾಡೋದು ?

ಸೂಳೆ (ಮುಚ್ಚಿದ ಕಣ್ರೆಪ್ಪೆಗಳನ್ನು ಬಿಚ್ಚದ) ಇನ್ನೂ ಟಾ ಬೇಡ !

ಸುಬ್ಬು ಮತ್ತಿನ್ನು ಸ್ಪೈಯಿ ? ನಾಳೆ ಗತಿ !

ಸೂಳೆ ಸ್ಪೈಗೆಂತ್ಕೇಮ ಉಪವಾಸ !...ನಾಳೆ ಗತಿ ನಾಳೇದು !

ಸುಬ್ಬು ಹಾಲಾದ್ರೂ ?

ಸೂಳೆ ಬೇಡ ಸುಬ್ಬೂ ! ನಿದ್ರೆ ! ಸುಬ್ಬು ! ಒಂದ್ಕಥೆ ಹೇಳು ಕಥೆ ಹೇಳೋದ್ರಲ್ಲಿ ರುಸ್ತುಂ ಅಲ್ವೆ ನೀನು ಎಷ್ಟ್ವರ್ಷ ಆಯ್ತು ಸುಬ್ಬು ? ನಾನೇ ಹೇಳ್ತೇನೆ ಸರಿಯಾಗಿ ಹತ್ವರ್ಷ ನನಗಾಗ ಹದ್ನಾಲ್ಕ್ವರ್ಷ ನಿನಗೆ ಹತ್ತೊಂಬತ್ವರ್ಷ ಎಷ್ಟು ಕಥ ಹೇಳಿದ್ದೀಯಾ ನನಗೆ ! ಈಗ ಹೊಸ್ದೊಂದು ಕಥೆ ಹೇಳ್ತಾ ಇರು "ಹೊಂ" ಗುಟ್ತಾ ಇರ್ತೇನೆ "ಹೂಂ" ಅನ್ನೋದು ನಿಲ್ಲುತ್ಲೂವೆ ನೀನು ಮಲಕ್ಕೊ ಸುಡೀದೆ ಹಾಲು ಕುಡ್ದೇ ಮಲಕ್ಕೊ (ಸುಬ್ಬು ಕೋಣೆಯ ದೀಪಗಳನ್ನೆಲ್ಲಾ Switch off ಮಾಡ್ಬಿಟ್ಟು, ಹಿತ್ತಾಳೆಯ Candle ಒಂದನ್ನು ಹಚ್ಚಿಟ್ಟು, ಸೋಫಾ ವನ್ನು ಸೇರಿ ನೆಲದ ಮೇಲೆ ಕುಳಿತುಕೊಂಡು, ಬೀಸಣಿಗೆಯೊಂದರಿಂದ ಸೂಳೆಯ ಮುಖಕ್ಕೆ ಬೀಸುತ್ತಾ ಕಥೆಯನ್ನು ಹೇಳತೊಡಗುವನು.)

ಸುಬ್ಬು . ಅಳ್ಕಾಪುರೀ, ಅಳ್ಕಾಪುರೀಂತ ಒಂದ್ಪಟ್ಣ ಅದಕ್ಕೆ ಅಳ್ಕೇಶ ಅಳ್ಕೇಶ ಅಂತ . ..

ಸೂಳೆ ಅಳ್ಕಾಪುರಾ ? ..ಕುಬೇರನ್ಪಟ್ಣಾ ಅಲ್ವೇ ?

ಸುಬ್ಬು : ಸರ್ಹೋಯ್ತು ? ಹೀಗೆ ವ್ಯಾಖ್ಯಾನಮಾಡ್ತಾ ಇದ್ರೆ ನೀನು

. ಹಾಗಾರ್ಕೇಳು,.... ಮಧುರಾಪುರೀ ಮಧುರಾಪುರೀಂತ ಒಂದ್ಪಟ್ಣ.

**ಸೂಳೆ** ಯಾವ್ದು? ಕೃಷ್ಣ ಕಂಸಾನೇ ಉಗ್ರಸೇನ

**ಸುಬ್ಬು** ದನ್ಮಯ್ಯ ಕೇಳು ಬುಳ್ಳಾಪುರೀ ಬುಳ್ಳಾಪುರೀಂತ ಇಟ್ಕೋ ಒಂದ್ಪಟ್ಣ

**ಸೂಳೆ** (ಕಣ್ಣುಗಳನ್ನು ಅರ್ಧ ಮುಚ್ಚುತ್ತಾ) ಹೂಂ, ಹೂಂ

**ಸುಬ್ಬು** ಅದ್ನ ಬುಳ್ಳೇಶ ಬುಳ್ಳೇಶಾಂತ ಒಬ್ಬ ರಾಜ ಸತ್ಯವ್ರತನಾಗಿ ಧರ್ಮದಿಂದ ಪಾಲಿಸ್ತಾ ಇದ್ದ

**ಸೂಳೆ** · ಹೂಂ

**ಸುಬ್ಬು** ರಾಜನಿಗೆ ಸತ್ಯವತೀ ಸತ್ಯವತೀಂತ ಪಾತಿವ್ರತ್ಯದಲ್ಲಿ ಸೀತಾ ಸಾವಿತ್ರೀರ್ನೇ ಸೋಲಿಸೋ ಧರ್ಮಾನ ಆಚರಿಸ್ತಿರೋ ಪತ್ನಿ

**ಸೂಳೆ** : (ಕಣ್ಣುಗಳನ್ನು ಮುಚ್ಚಿಕೊಂಡು ಘನಶ್ವಾಸವನ್ನು ಬಿಡುತ್ತಾ) ಹೂಂ

**ಸುಬ್ಬು** . ರಾಜನಿಗೆ ಐವತ್ತು ವಯಸ್ಸಾಗುತ್ತಾ ಬಂತು ರಾಣೀಗೂ ನಲ್ವತ್ತು ನಲ್ವತ್ತೈದು ಆದ್ರೂ ಇಬ್ಬರಿಗೂ ಒಂದೇ ಕೊರ್ತೆ ಇಬ್ಬರ್ಗೆ ಏನೂ ,—ಇವರಿಬ್ಬರ್ಗೂ ಪೂಜೆ ಮಾಡ್ತಿದ್ದ ಪ್ರಜೆಗಳಿಗೆಲ್ಲಾ ಇದೇ ಕೊರ್ತೆ , ಇವರಿಗೆ ಮಕ್ಕಳಿಲ್ಲ ರಾಜ್ಯಾನ ಮುಂದಾಳೋಕೊಬ್ಬ ಮಗನಿಲ್ಲ ಪೂಜೆಗಳೆಷ್ಟೋ ಸಂತರ್ಪ್ಣೆಗಳೆಷ್ಟೋ, ಗೋದಾನ, ಭೂದಾನಗೈಷ್ಟೋ, ಇವೆಲ್ಲಾ ಅಲ್ದೆ ಕೋಟ್ಯಾಂತರ ವರಹಾ ಖರ್ಚುಮಾಡಿ ಪುತ್ರಕಾಮೇಷ್ಟೀನೂ ಆಯ್ತು.. .ಫಲವೇನೂ ಇಲ್ಲ ...ರಾಜದಂಪತಿಗಳ ದುಃಖ ಹೇಳಕ್ಕಾಗದು ..ಒಂದಮಾವಾಸ್ಯೆ ರಾತ್ರಿ ಉಪವಾಸ ಇದ್ದ ಮಹಾ

ರಾಣೀಗೆ, ಮಧ್ಯರಾತ್ರೀ ಕನಸೊಂದ್ಬಿತ್ತು "ರಾಜದಂಪತಿಗ್ಳು ಇಬ್ರೂ ನೂವೆ ಪರಿವಾರವೇನೂ ಇಲ್ದೆ ಪಾದಚಾರರಾಗಿ ಒಂದ್‌ಗೊಂಡಾರಣ್ಯಾನ ಹೊಕ್ಕ್ಯಾಗೂ ಸಿಂಹ, ಶಾರ್ದೂಲ, ಭಲ್ಲೂಕಾದಿ ಕ್ರೂರಮೃಗಗಳ ಅಪಾಯ ತಪ್ಪಿಸ್ಕೊಂಡ್ಯಾಗೂ, ಕೊನೇಗೆ ಶಾಂತಸ್ವರೂಪಿಯಾದ ಋಷಿಯೊಬ್ಬನ್ನ ಕಂಡಹಾಗೂ, ಆತ ಕೃಪೆಯಿಂದ—ನೀವಿಬ್ರೂ ರಾಜ್ಯವನ್ನು ಸೇರಿ, ಅಹೋರಾತ್ರಿ ಮೂರು ಮಂಡಲಗಳೂ ಮೂವತ್ತೂ ಮೂರು ಹಗಲಿರುಳುಗ್ಳು ಮಹಾಕಾಳೀನ ಸೇವ್ಸಿದ್ರೆ ನಿಮ್ಮಿಷ್ಟಾರ್ಥ ಫಲಿಸುತ್ತೆ" — ಅಂದ್ಯಾಗೂ ಬದ್ದದ್ದು ಆ ಕನಸು ಈ ಕನಸ್ನ ರಾಣೀ ರಾಜನಿಗೆ ಹೇಳುತ್ಲೂನೂವೆ ಮಂತ್ರಿ ಪುರೋಹಿತರ ಆಲೋಚನೆ ಪ್ರಕಾರ, ರಾಜದಂಪತಿಗ್ಳು ಗೊಂಡಾರಣ್ಯ ಹೊಕ್ಕು, ರಾಜ ಧನುರ್ಧಾರಿಯಾಗಿ, ದುಷ್ಟ ಮನುಜ, ರಾಕ್ಷಸ, ಕ್ರೂರ ಮೃಗೇತ್ಯಾದಿಗಳನ್ನು ಶಿಕ್ಷಿಸುತ್ತಲೂ ಶಿಷ್ಟ ಮನುಜ ಮೃಗೇತ್ಯಾದಿಗಳನ್ನು ರಕ್ಷಿಸುತ್ತಲೂ ಕೊನೇಗೆ ಒಂದು ಆಶ್ರಮವನ್ನು ಕಂಡು, ಧನುಸ್ಸಿನ ನಾಣನ್ನು ಬಿಚ್ಚಿಬಿಟ್ಟು, ಸತಿಪತಿಗಳಿಬ್ಬರೂ ಋಷಿಸೇವೆಯನ್ನು ಮಾಡತ್ತೂ ಸಂತುಷ್ಟನಾದ ಆ ಋಷಿ, "ನಿಮ್ಮ ಶಿಶ್ರೂಷೆಗೆ ಮೆಚ್ಚಿದೆ ನೀವಿಬ್ಬರೂ ಸ್ವರಾಜ್ಯಕ್ಕೆ ಪುನಃ ತೆರಳಿ, ಅಹೋರಾತ್ರಿ ಅರ್ಧ ಹೊಟ್ಟೆಗೆ ಮಟ್ಟೆಗೂ ಆಹಾರಾನ ಒಡಗಿಸ್ತಾ ಈ ಹದಿನಾಲ್ಕು ಲೋಕಾನೇ ಹೆತ್ತ ಮಹಾಕಾಳೀನ ಔಪಾಸನೆ ಮಾಡಿ ಮುಗಿಸಿದ ಮುಹೂರ್ತ್ದೆ ರಾಜದಂಪತಿಗ್ಳು, ತಿರಗ್ತಮ್ಮ ರಾಜ್ಯಕ್ಬರ್ತಾಬರ್ತಾ ತಮ್ಗೆ ಹುಟ್ಟೋ ಮಗನ್ನಾತೇ ಆಡೋ ಸಂತೋಷದಲ್ಲಿ ತಮ್ಮುತ್ಲೂನೆ ಇರೋದು ಗೊಂಡಾರಣ್ಯ ಅಂಬೋದ್ನೇ ಮರ್ತು ಬರ್ತಿದ್ದಾಗ .. ಇವ್ರೆದೂರ್ಗೆ ಒಂದ್ಸಂಜೆ ಸೂರ್ಯಾಸ್ತಮಯದ ಕಾಲದಲ್ಲಿ ಮುಳುಗದ್ ಸೂರ್ಯನ್ ಮುಚ್ಚೋ ಕಪ್ಪಂಕಪ್ಪನೆ ನೆಳಲೊಂದ್ ಕಂಡ್ಬಂತು. "ಇದೇನೋ?" ಅಂತ ಅನ್ನುವಷ್ಟರಲ್ಲೇ ಆ ನೆಳಲು ಆಕಾಶ ಭೂಮಿಾನ ಅವಲಂಬ್ಸಿರೋ ಬ್ರಹ್ಮರಾಕ್ಷಸ್ನಾಗಿ ತೋರ್ಪ

ಡಿಸ್ಕೊಂಡು ಬರ್‍ತಾ ಬರ್‍ತಾ ಆ ಭೂತ ಕುಗ್ಗೀ ಕುಗ್ಗೀ ಕೊನ್
ಕೊನೇಗೆ ಇನ್ರೆದುರ್ಗೆ ಇವರಿಬ್ಬರ ಎರಡ್ರಷ್ಟು ಎತ್ತರ ರಾಕ್ಷಸ
ನಾಗಿ ನಿಂತು "ಕ್ಷುದ್ಬಾಧೆ ನನಗೆ ಸರಿಯಾಗಿ ಆಹಾರ
ವಾಗಿ ಬಂದಿಧೀರಾ" ಎಂದು ಕೈಗಳನ್ನು ಹರಡಿ, ಬಾಯನ್ನು
ಬಿರಿದ ರಾಕ್ಷಸನ್ನೋಡಿ, ರಾಜಪತ್ನಿ, "ಅಯ್ಯೋ! ನಾವು ವೃದ್ಧ
ದಂಪತಿಗ್ಳು ಮಾಂಸರಕ್ತ ಬಹಳ ಕಮ್ಮಿ ನಮ್ಮ ದೇಹದಲ್ಲಿ,
ಮುದಿ ದಂಪತಿಗಳ್ನ ಭಕ್ಷಿಸಿದಲ್ಲಿ ನಿನ್ನ ಕ್ಷುದ್ಬಾಧೆ ಶಮನ
ವಾಗದು ಅಲ್ದೇ "ಪುತ್" ಎಂಬ ನರಕಾನ್ನ ತಪ್ಪಿಸ್ಕೊ
ಳ್ಳೋಕೆ ರಾಜ್ಯಾನ ಬಿಟ್ಬಂದು, ಸಂತಾನಕ್ಕೆ ವರಾನ್ನ ಪಡೆದು
ಹಿಂತಿರ್ಗೋ ನಮ್ಮನ್ನೀಗ್ ತಿಂದ್ರೆ ನಿನ್ನ ಹಸಿವನ್ ತೀರ್ಸಿದ
ಪುಣ್ಯಾ ನಮಗೇ ಸೇರತ್ತೇ ಆದ್ರೆ ನಮ್ಮಿಬ್ಬರ್ಗೆ ತಪ್ಪೊ
ಪುನ್ನರಕಾ ನಿನಗ್ ಲಭಿಸುತ್ತೆ" ಅನ್ನುತ್ಲೂವೆ ರಾಕ್ಷಸ ಬೆದ್ರಿ,
"ಹಾಗಾದ್ರೆ ನಿಮ್ರಾಜ್ಯ ಸೇರಿ, ನಿಮ್ಮುತ್ರನ್ನೀವ್ ಹೆತ್ತು,
ನಿಮ್ಸಂತೋಷ ನೀವನುಭವಿಸಿಕೂಳ್ಳಿ! ಆದ್ರೊಂದ್ಮಾತು,
ಈವತ್ನಿಂದ ಹದಿನೆಂಟು ವರ್ಷ ಬಿಟ್ಟು, ಒಂದು ದಿನ ನಿಮ್ಮ
ರಾಜ್ಯಕ್ಕೆ ಬಂದು, ನನಗ್ಬೇಕಾದ ಒಂದ್ವಸ್ತುನ ಕೇಳ್ತೀನೆ
"ಅದ್ನ ಕೊಡ್ತೇನೆ" ಅಂತ ಈಗ್ಮಾತ್ಕೊಟ್ರೆ ಬಿಡ್ತೇನ ನಿಮ್ಮನ್ನ
ಇಲ್ದೋ ನೀವಿಬ್ರೂ ನಾವೆ ಒಂದೇ ತುತ್ ನನ್ಬಾಯಿಗೆ"
ಅನ್ನುತ್ಲೂವೆ, ಆ ರಾಜದಂಪತಿಗ್ಳು, "ಸಧ್ಯ ತಪ್ಪಿಸ್ಕೊಂಡ್ರೆ
ಸಾಕು ಮುಂದಿನ್ನು ಹದ್ನೆಂಟು ವರ್ಷ ಆಗೋ ಹೊತ್ತಿಗೆ
ನಾವ್ಬದ್ಕಿರ್ತೇವೋ ಇಲ್ದೋ? ಹಾಗ್ಬದ್ಕಿದ್ರೂವೆ. . ಮುಂ
ದೊದ್ಗೋ ಅಪಾಯಕ್ಕೆ ಪ್ರತೀಕಾರ ಮುಂದ್ಮಾಡ್ಕೋ ಬಹ್ದು
ಸದ್ಯಕ್ಕೆ ಇವನ್ಬಾಯಿಗೆ ತುತ್ತಾಗೋದ್ನ ತಪ್ಪಿಸ್ಕೊಳ್ಳೋದೇ
ಜಾಣ್ತನ" ಅಂತ ತೀರ್ಮಾನಿಸಿ, ರಾಕ್ಷಸಂಗೆ "ಹದ್ನೆಂಟ್ವರ್ಷ
ನೀನ್ದೇಳ್ದಾಗೆ ನಮ್ಮನ್ನಾಡಿಸಬೇಡ ಆಮೇಲೆ ಒಂದು ನಮ್ಮಿ
ಬ್ಬರನ್ನು ಬಿಟ್ಟು ನಿನಗ್ಯಾವ ವಸ್ತು ಬೇಕೋ ನಮ್ಮ ಸಾಮ್ರಾ
ಜ್ಯದಲ್ಲಿ ಅದನ್ನ ಕೊಡ್ತೇವೇ!" ಅಂತ ಮಾತ್ಕೊಟ್ಟು ತಮ್ಮ

ರಾಜ್ಯಕ್ಕೆ ಹಿಂತಿರುಗ್ಬಂದು ಒಂದು ಮಹಾಕಾಳೀ ಪೂಜೇನ ಋಷಿಗಳ್‌ಹೇಳ್ದಾಗೆ ಸಾಂಗೋಪಾಂಗವಾಗಿ ಜರಗ್ಸಿ, ಮಹಾ ಕಾಳೀನೂ ಸಂತುಷ್ಟಳಾಗಿ ರಾಣಿ ಗರ್ಭಧರಿಸಿ ಹತ್ತು ತಿಂಗ್ಳು ಹೊತ್ತು, ಹೆತ್ತು ರಾಜಪುತ್ರಾನೂ ಹುಟ್ಟಿ ಅಲ್ದೆ ಪ್ರಹ್ಲಾದ, ಧ್ರುವ, ಅಭಿಮನ್ಯು ಇತ್ಯಾದಿ ರಾಜಪುತ್ರರ ಹಾಗೆ ಬೆಳ್ದ, ಇವನ ಹದಿನೆಂಟನೆಯ ವಯಸ್ಸಿನಲ್ಲಿ ವೃದ್ಧರಾದ ರಾಜ ರಾಜ್ಞಿ ಯರು, ಮಗನ್ನ ಕೂಟ್ಟ ಮಹಾಕಾಳೀ ಗುಡಿ ಗರ್ಭದಲ್ಲಿ ಮಂಗಳಾರ್ತಿ ತೊಗೋಳ್ತಿದ್ದಾಗ, ಬ್ರಾಹ್ಮಣ ಒಬ್ಬ ಇವರಿಬ್ಬರ್ಗೂ ಒಂದು ನೀಲೋತ್ಪಲ ಕೊಟ್ಟು ಆಶೀರ್ವದಿಸಿದ ಇದಕ್ಸಂತೋಷ ಪಟ್ಟು, ಆ ಬ್ರಾಹ್ಮಣನ್ನ ಅರಮನೆಗೆ ಕರ್ಕೊಂಡ್ಬಂದು ಸತ್ಕರಿಸಿ "ತಸ್ಕ್ರೈಸ್ವೇಹೂಂ"ತ ಕೇಳುತ್ತೂಲ್ಲವೆ ನೆಲದಿಂದ ಸೂರಿನವರ್ಗೂ ಒಂದೇ ಸ್ವರೂಪಾನ ಅನಲಂಬ್ಸಿದ, ಹದ್ನೆಂಟ್ವರ್ಷಕ್ಮುಂಚೆ, ಗೊಂಡಾರಣ್ಯದಲ್ಲಿ ಕಾಣಿಸ್ಕೊಂಡ ಬ್ರಹ್ಮರಾಕ್ಷಸ "ಕೊಟ್ಮಾತು ತಪ್ಪೋದು ನಿಮ್ಮ ಕುಲ ಗೋತ್ರದಲ್ಲೇ ಇಲ್ಲಾ ನೀವ್ಕೊಟ್ಟ ಮಾಗ್ದಾನ ನಡಿಸ್ಕೊಡೀ" ಅಂತ ಕೇಳೋಕೆ ಬಂದಿದ್ದೇನೆ ನಾನು" ಅಂತ ಬಲಗೈನ ಚಾಚ್ದ ರಾಕ್ಷಸ ಬೆಚ್ಚಿಬಿದ್ದ ರಾಜ ದಂಪತಿಗ್ಳು, ಹದ್ನೆಂಟ್ವರ್ಷಕ್ಕೆ ಮುಂಚೆ ನಡೆದದ್ದು ಅರ್ಧಂಬರ್ಧ ಜ್ಞಾಪಕಕ್ಕೊಳ್ದು, "ಅದೇನಾ ವಾಗ್ದಾನಾ" ಅಂತ ಅಂದ್ರು ರಾಕ್ಷಸ, "ನಿಮ್ಮ ರಾಜ್ಯದಲ್ಲಿ ನನಗ್ಬೇಕಾದ್ದು ಒಂದೇ ವಸ್ತು ಅದನ್ಕೊಡ್ತಿದ್ದ್ರೇ ಕೊಟ್ಟ ಮಾತ್ತಪ್ಪೋ ನರಕಕ್ಕೆ ನೀವಿಬ್ರೇ ಅಲ್ದೆ ನಿಮ್ಮ ಪಿತೃಗಳೂ ಇಳೀತಾರ ಮರೀಬೇಡಿ ನನಗ್ಬೇಕಾದ ವಸ್ತು ಒಂದೇ ಒಂದು. ನಿಮ್ಮ ಹದ್ನೆಂಟ್ ವರ್ಷ ತುಂಬಿದ ಕುಮಾರ!" ಅಂತ್ಹೇಳಿ, ವೃದ್ಧ ದಂಪತಿಗಳ್ನ ಮೂರ್ಛೆ ಹೊಂದ್ಸಿ . . ಪಕ್ಕದಲ್ಲಿದ್ದ ನೀರಿನ ಹೂಜೀನ ಅವ ರ್ಮುಖದ್ಮೇಲೆ ಖಾಲಿ ಮಾಡಿ, ಚೇತರಗೊಳಿಸಿ, . ಮಂತ್ರಿ ಮಂತ್ರಾಲೋಚನಾ ಸಭೆಗಳಿಂದ್ಲೂ, "ಸತ್ಯವೊಂದೇ ಸ್ವರ್ಗ ಸಾಧನ" ಅಂಬೋದ್ನ ಅವರ ಬುದ್ಧಿಗೆ ಸಲ್ಲಿಸಿ, ಅವ್ರ

ಹದ್ನೆಂಟು ವಯಸ್ಸಿನ ರಾಜಕುಮಾರನ್ನ ಗೊಂಡಾರಣ್ಯದಲ್ಲಿ ತನ್ನ ಮಾಯಾಶಕ್ತಿಯಿಂದ ತಾನು ನಿರ್ಮಿಸಿಕೊಂಡಿದ್ದ ಮಾಯಾ ಪಟ್ಟಣಕ್ಕೆ ತಗೊಂಡ್ಬಂದ ರಾಜಕುಮಾರನ್ನ ಅವನ ರಾಜ್ಯ ಕ್ಕಿಂತಲೂ ಚೆನ್ನಾಗಿದ್ದ ತನ್ನ ಮಾಯಾಪುರದಲ್ಲಿ ಇಟ್ಕೊಂಡು ಅವನಿಗ್ಬೇಕಾದ ಸಂತೋಷ ಸುಖಗಳ್ನ ಒದಗಿಸ್ತಾ ಅವನ ಹತ್ತೊಂಬತ್ನೇ ವಯಸ್ನಲ್ಲಿ, "ದಿನಾ ಬೆಳಗ್ನಿಂದ ಸಾಯಂಕಾಲದ ವರ್ಗ್ಗೂ ನಾನು ನನ್ ಸಂಚಾರಕ್ಹೋಗ್ಬೇಕಾಗಿದೆ ನೀನು ನಿನ್ ಸಂತೋಷಕ್ಕೆ ಈ ಪುರದ ಹೊರಗಡೆ ಉತ್ತರ, ದಕ್ಷಿಣ, ಪೂರ್ವ ದಿಕ್ಕುಗಳಲ್ಲಿ ಎಲ್ಲಿ ಬೇಕಾದ್ರೂ ಸಂಚರಿಸು ಕ್ಷಣಕ್ಷಣಕ್ಕೂ ಯೋಜನಾನ ಲಂಘಿಸೋ ಹಯ ನಿನ್ನದು ಆದರೆ ಪುರಾನ ಬಿಟ್ಟು ಪಶ್ಚಿಮಕ್ಕೆ ಇರೋ ಮಾರ್ಗಾನ ಮಟ್ಗೆ ಹಿಡಿಸ್ಬೋ ಗ್ಬೇಡ" ಅಂತ್ಹೇಳಿ, ದಿನಾ ಬೆಳಿಗ್ಗೆ ಎದ್ದು ಹೊರಟ್ಹೋಗೋದು, ರಾತ್ರಿ ಪುನಃ ಪಟ್ಣ ಸೇರೋದು ಹೀಗ್ಮಾಡ್ತಾ ಇದ್ದ ರಾಕ್ಷಸ ಹತ್ತೊಂಬತ್ನೇ ವಯಸ್ಸುಗ್ದು ಆ ರಾಜಕುಮಾರನ್ಗೆ ಇಪ್ಪತ್ನೇ ಹುಟ್ಟಿದ್ದಿನ ಮಾಯಾಪುರದ ಉತ್ತರ, ದಕ್ಷಿಣ, ಪೂರ್ವದ್ವಾದಿ ಗಳ್ನ ಸಂಚರ್ಸಿ ಸಂಚರ್ಸಿ ಒಂದಿನ ಮಟ್ ಮಟ್ ಮಧ್ಯಾಹ್ನ ನಿತ್ಯ ಅರಮನೆ ಕಡೆ ತಿರಗ್ತಿದ್ದ ಕುದುರೆ ಪಶ್ಚಿಮ ದಿಕ್ಕಿನ ಕಡೆ ರಶ್ಮಿಗಳನ್ನು ಸೆಳೆಯುತ್ತಾ ಹಟ ಹಿಡೀತು, ಅದರ್ಹಟ ಪರೀಕ್ಷ್ಸೋಕೆ, ಆ ರಾಜಕುಮಾರ ರಶ್ಮಿಗಳ .... ರಶ್ಮಿ . .ಎದ್ದಿದ್ದಿಯಾ ಚಿನ್ನಾ ?

ಸೂಳೆ ಹೂಂ ! ಸುಬ್ಬು ! ಈ ರಶ್ಮಿ ಬಾಬ್ತು ಬಿಟ್ಬಿಟ್ಟು, ಬರೀ ಲಗಾಮೂಂತನ್ನೂ ! . ದಮ್ಮಯ್ಯ, ಸುಬ್ಬು ಕಥೆ ಸ್ವಾರಸ್ಯ ವಾಗಿದೆ ... ಮುಂದಕ್ಹೇಳಸು . ರಾಜಪುತ್ರನ್ನುದ್ರೆ ಅವ ನ್ಹೋಗೋವಾಗ ಪಶ್ಚಿಮ ದಿಕ್ಗೇ ಸೆಳೀತಿತ್ತು ... .ಅವ್ನು ಆಶ್ಚರ್ಯಪಟ್ಟು ಲಗಾಮ್ ಡೀಲಾಗ್ಬಿಟ್ಬಿಟ್ಟ .......ಮುಂದೇ ನಾಯ್ತು ?

ಸುಬ್ಬ ಆ ಮೇಲೆ ಕುದ್ರೆ ಹಾಗೇ ಪಶ್ಚಿಮುಕ್ಕೆ ತಿರುಕ್ಕೊಂಡು ಹೋಗ್ತಿದ್ದಾಗ . ನೋಡ್ತಾನೆ ಒಟ್ಟೆ ಒಂದೇ ಮರುಭೂಮಿ ಹೋಗ್ತಾ ಹೋಗ್ತಾ ದೂರದಲ್ಲಿ ಕಂಡ್ಬಂತು ಒಂದೇ ಒಂದು ಗುಡಿಸ್ಲು ಹತ್ರಾ ಬರ್ತಾ ನೋಡ್ತಾನೆ, ಆ ಗುಡಿಸ್ಲಿಗೆ ಚಂಡುಗ್ಳಿಂದ ಮಾಡಿದಂಥಾ ಗುಂಡು ಗುಂಡು ಹೆಂಚುಗ್ಳು! ಇನ್ನೂ ಹತ್ರಾ ಬರುತ್ಲಾವೆ . .ಆ ಗುಂಡು ಗುಂಡು ಹೆಂಚುಗಳೆಲ್ಲಾ ಮಾನುಷ ರುಂಡಗ್ಳು . .. ಅಲ್ದೇ ಜೀವಸಹಿತ! ಇವ್ನು ಗುಡಿಸ್ಲು ಮುಟ್ಟುತ್ಲಾವೇ ಆ ತಲೆಗಳೆಲ್ಲಾ ಇವನ್ಕಡೆ ತಿರುಗಿ, ಫಕಫಕಾಂತ ನಗ್ತಾ "ಹಾ! ಹಾ!! ಹಾ!!! ಹಾ!!!! ಬಂದ್ಯಾ ಬರ್ತೀಯಾಂತ್ಗೊತ್ತು ನಮ್ಗೆ!" ಅಂತ ಆ ಮುಂಡಗಳಿಲ್ಲದ ರುಂಡಗ್ಳ ನಗೂನ ಕೇಳುತ್ಲಾವೆ, 'ಧನ್' ಅಂತು ಇವನ್ಗುಂಡ್ಗೆ! . ಕುದುರೇನೂ ಹಿಮ್ಮೆಟ್ತು! ಆದ್ರೂ ಲಗಾಮೂ ಬಿಗಿಹಿಡ್ದು, ಹಲ್ಕಚ್ಕೊಂಡು, ಆ ತಲೆಗಳ್ಕಡೆ ಕಣ್ಣೆತ್ತಿ ."ಯಾಕ್ನಗ್ತೀರಾ?" ಅಂದ ಮುಂದಿದ್ದ ತಲೆ, "ನಾವೆಲ್ಲಾ ನಕ್ಕದ್ದೂ ನೂರೇಳು ತಲೆಗ್ಳು ನಾವು .ಇನ್ನೊಂದ್ತಲೇಗೆ ಸ್ಥಳ ಇರೋದು ಇಲ್ಲಿ ಈ ಖಾಲಿ ಯಾವತ್ತು ಭರ್ತಿಯಾಗುತ್ತೇಂತ ಇಷ್ಟ್ದಿನಾನೂ ಎದುರ್ನೋಡ್ತಿದ್ವು, ಈಗ ನಿನ್ತಲೇ ಕಾಣತ್ಲಾವೆ ನಗು ಬಂತು . ನಮ್ಗೆ!" ಅನ್ನೋದ್ನ ಕೇಳತ್ಲಾವೇ, ಮೈಯೆಲ್ಲಾ ಬೆವರಿಟ್ಕೊಂಡ್ತು ನಮ್ಮ ರಾಜಕುಮಾರನ್ಗೆ! ಇವನವಸ್ಥೇನ್ನೋಡಿ ಇನ್ನೊಂದ್‌ತಲೇ ಮೊದಲ್ನೇ ತಲೇಗೆ, "ಅಂಗರಾಜಕುಮಾರ! ಇದು ಹಾಸ್ಯಕ್ಕೆ ಸಮಯವಲ್ಲ, ಈ ರಾಕ್ಷಸನ ಮಾಯೆಯಿಂದ ನಮ್ಮ ರುಂಡಗಳು ಸೂರಿನಲ್ಲೂ, ಮುಂಡಗಳು ಕೆಳಗೆ ಕುಟೀರದಲ್ಲೂ ಬೇರೆ ಬೇರೆಯಾಗಿ ಬಿದ್ದಿವೆ . . .ನಮ್ಮ ಅವಸ್ಥೆನಲ್ಲದೇ, ನಮ್ಮನ್ನು ಕಳೆದುಕೊಂಡ ನಮ್ಮ ಪುತ್ರ ವಿರಹಾವಸ್ಥೆಯನ್ನೂ ಹೋಗಗೊಳಿಸುವುದಕ್ಕೆ ನಮ್ಮನ್ನೂ ಹೆತ್ತವರನ್ನೂ ಕಾಪಾಡೋ ಧರ್ಮದೇವತೆಯೇ ಈತನನ್ನು ನೆಪವಾಗಿ ಕಳುಹಿಸಿರಬೇಕು .........ಹಾಸ್ಯಾನ ಬಿಟ್ಟು ಈತನನ್ನೂ

ನಮ್ಮನ್ನೂ ಈ ರಾಕ್ಷಸನ ಕೈಯಿಂದ ಪಾರುಮಾಡಿ ನಮ್ಮ ಮಾತಾಪಿತೃಗಳನ್ನು ಕೂಡುವ ಬಗೆಯನ್ನು ಇತ್ಯರ್ಥಮಾಡೋ ದಲ್ಲವೇ ವಿವೇಕ!?” ತನ್ನತ್ಲೂವೆ ಎಲ್ಲಾ ತಲೆಗ್ಳೂ “ಹೌದು, ಹೌದು!” ಅಂತ ಬಾಗಿದವು ಎರಡನೇ ತಲೆ ನಮ್ಮ ರಾಜ ಕುಮಾರನನ್ನು ನೋಡಿ, “ನಿನ್ನನ್ನು ಕರತಂದ ಮಾಯಾವೀ ರಾಕ್ಷಸನೇ ನಮ್ಮನ್ನೂ ಕರತಂದು, ನಮ್ಮ ಇಪ್ಪತ್ತೆರಡ್ನೇ ಹುಟ್ಟಿದ್ದಿನ ತಲೇನ ಮೈನ ಬೇರೆಮಾಡಿ ಈ ಗುಡಿಸಲ್ಕೆಳಕ್ಕಡವಿ, ಶಿರಸ್ಸನ್ನು ಹೆಂಚಾಗಿ ಇಟ್ಟು, ಇದೇ ಪ್ರಕಾರ ನೂರೆಂಟು ರಾಜಕುಮಾರ ಶಿರಸ್ಸಿನಿಂದ ನಿರ್ಮಿಸಿದ ಸೂರೂ ಅಲ್ಲದೆ, ಅವರ ನೂರೆಂಟು ಮುಂಡಗಳು ತುಂಬಿದ ಕುಟೀರವನ್ನು ನಿರ್ಮಿಸಿ ಅವುಗಳನ್ನು ಅಗ್ನೀಪಾಲು ಮಾಡಿದ ಕ್ಷಣವೇ ಅಮರ ರಾಜ ಪದ್ವೀ ಸಿಕ್ಕುತ್ತೇಂತ ಬ್ರಹ್ಮನಿಂದ ವರ್ಗಳನ್ನು ಕೈಗೊಳ್ಳೋ ನಿಮಿತ್ತ, ನಮ್ಮನ್ನೂ ನಿನ್ನನ್ನೂ ಈ ಅವಸ್ಥೇಗೆ ತಂದ ರಕ್ಕಸ ನಿಂದ ನಾವೆಲ್ಲ ತಪ್ಪಿಸಿಕೊಳ್ಳುವ ಸಾಮರ್ಥ್ಯ ನಿನ್ನ ಕೈಯಲ್ಲೇ ಇದೆ” ಅನ್ನತ್ಲೂವೆ “ಅದೇನಸಾಧ್ಯವಾ?” ಅಂದ ನಮ್ಮ ರಾಜಕುಮಾರ ಆಗ ಆ ಎರಡ್ನೇ ತಲೆ, ಪಶ್ಚಿಮದಿಕ್ಕಿನಲ್ಲಿ ಇನ್ನೂ ಬಹ್ದೂರ್ದಲ್ಲಿ ಕಾಣೋ ದೊಡ್ಡ ಮರಾನ ಕಣ್ಣಿನಿಂದ ಸೂಚಿಸಿ .“ಕಾಣತ್ಯೇ ಆ ದೂರದಲ್ಲಿರೋ ಆಲದಮರ?” ಅಂತು ಅದಕ್ಕೆ ರಾಜಕುಮಾರ, “ಹೂಂ!” ಅನ್ನು ತ್ತ್ಲೂವೆ .(ಸೂಳೆಗೆ) ಇದ್ಯಾಕೇ ಚಿನ್ನಾ “ಹೂಂ” ಗುಟ್ಲಿಲ್ಲಾ?

**ಸೂಳೆ** (ಅರೆನಿದ್ದೆಯಲ್ಲಿ ಅರ್ಧಮುಚ್ಚಿರುವ ಕಣ್ಣುಗಳನ್ನು ಥಟ್ಟನೆ ಬಿಟ್ಟು) “ಹೂಂ.”

**ಸುಬ್ಬು** “ಹಾಗೆ ನಿನಗಾಮರ ಕಂಡ್ಬರೋದಾದ್ರೆ ನೆಟ್ಗೆ ನಿನ್ನುದ್ರೇ ನ್ನೋಡ್ಸಿ ಅಲ್ಲಿಗ್ಹೋಗಿ, ಕುದ್ರೇನ್ಬಿಟ್ಟಳ್ದು, ಅದ್ರ ಬುಡಾನ್ಸೇರಿ ..... ...‘ಅಹಿಂಸಾ ಪರಮೋಧರ್ಮಃ’ ‘ಅಹಿಂಸಾ ಪರಮೋ

ಧರ್ಮಃ' ಎಂದು ಬಾರಿಬಾರಿಗೂ ಜಪಿಸುತ್ತಾ, ಆ ಮರಾನ್ಹತ್ತಿ ಕೊನೇ ಕೊಂಬೇನ್ಸೇರುತ್ಲೂವೆ ಅಲ್ಲೊಂದು ಪಂಚವರ್ಣದ ಗಿಳಿ ಕಾಣ್ಸುತ್ತೆ ಅದು ಸಾಧಾರಣವ್ಗಿಳೀಂತ ತಿಳ್ಕೋಬೇಡ ಸರ್ವಜ್ಞಳಾದ ಸರಸ್ವತಿಯ ಮುದ್ದು ಗಿಳಿ ಅದು ನೀನದನ್ ಸಮೀಪಿಸುತ್ಲೂನೂವೆ ಅದು "ಯಾರ್ನೀನು?" ಅಂತ ಕೇಳುತ್ತೆ ಆಗ ನೀನು ಮಂಕನ್ಹಾಗೆ ನಿನ್ನ ಗುಣಕಥನವಮಾಡ್ಬೆ, 'ನಾನ್ಯಾರಾದ್ರೇನು ನೀನು ಎಲ್ಲಾನೂ ತಿಳಿದ ಗಿಣಿ' ಅಂತ ಹೇಳಿ 'ಹತ್ರನ ಮೇಲ್ಕಕ್ಕೀಳಿ ಹುಡುಕ್ಕೊಂಬಂದ ನನ್ನ ನೀನ್ಯಾರೂಂತ ಕೇಳ್ತೀಯೆಲ್ಲಾ ಹಾಗಾದ್ರೆ ಸರ್ವಜ್ಞ ಗಿಣಿ ಅಲ್ಲ ನೀನು, ಸರ್ವೇ ಸಾಧಾರಣ ಗಿಣಿ ನೀನು!' ಅಂತ ನೀನನ್ನತ್ಲೂವೆ, ಆ ಗಿಣಿ ರೇಗಿ, 'ನನ್ನ್ ಜ್ಞಾನ ಹಾಗಿರ್ಲಿ ನಿನ್ನ್ ಜ್ಞಾನ ಪರೀಕ್ಷಿಸಿ ನೋಡೋಣ! ಈಗ ನನ್ನ ಮೈಯಲ್ಲೆಷ್ಟು ಬಣ್ಣಗಳಿವೆ" ಅಂತ ಕೇಳುತ್ತೆ ಆ ಹಕ್ಕಿ ಅಪಕ್ಕೇಸುತ್ತ್ರ ಹೇಳ್ತೀಯಾ? ಅಂತ ಕೇಳ್ದಿರಡ್ನೇ ತಲೇಗ ರಾಜಕುಮಾರ "ಅದೇ ನೀನ್ಹೇಳಿದ ಪಂಚವರ್ಣದ ಗಿಳಿ ಐದು ಬಣ್ಣಗಳು ಕೆಂಪು, ನೀಲ, ಹಸ್ರು ಇತ್ಯಾದಿ", ಅಂದಿದ್ದಕ್ಕೆ ಆ ಎರಡ್ನೇ ತಲೆ, "ಅಯ್ಯಯ್ಯೋ ಬೆಪ್ಪೂ! ಹಾಗೇನಾದ್ರೂ ಬೊಗುಳ್ಬ್ಯೇ ಸರ್ವನಾಶ! ಆಹುತಿ! ನೀನೂ ನಾವೆಲ್ಲ್ರೂವೇ ಆ ರಾಕ್ಷಸನ ನಾಲ್ಗೇಗೆ!! ನಾನ್ಹೇಳೋದ್ನ ಗಮನ್ಸಕೇಳು ಆ ಗಿಳಿ ಕೇಳುತ್ಲೂ ಆ ಪ್ರಶ್ನೇನ ನೀನು ನಿನ್ನ್ ಜನಿವಾರ ಬಲಗೈಲ್ಹಿಡ್ಕೊಂಡು, 'ಮುಕ್ತಾ, ವಿದ್ರುಮ, ಹೇಮ, ನೀಲ, ಧವಳ'" ಅಂತ ಹೇಳ್ತಿರುವಾಗ್ಲೇ ನಮ್ಮ ರಾಜ ಕುಮಾರನ್ಮುಂದೆ ಆಕಾಶ ಭೂಮೀನೂ ಆವರ್ಸ್ಕೊಂಡಿರೋ ಕಪ್ಪಂಕಪ್ಪೆ ಆಕಾರ ಬಂದ್ ಧುಮ್ಕ್ತು ಆದನ್ನೋಡಿ ಆ ನೂರೇಳು ರಾಜಕುಮಾರ್ರ ಮುಂಡಗಳಿಲ್ಲದ ರುಂಡ್ಗಳು, "ಹಯ್ಯೋ, ಕೆಟ್ಟೆವಲ್ಲಾ!!! ಇನ್ನೇನ್ ನಮ್ಮ್ಗತೀ'ಂತ ಕಿರ್ಚಿದ್ವು ಇದ್ಯಾವ್ಕಿನ್ನಾ ಹೂಂ ಗುಟ್ಲಿಲ್ಲಾ! (ಸೂಳೆಯು ಸುಸ್ತಾಗಿ ನಿದ್ರಿಸುತ್ತಿರುವುದನ್ನು ಗಮನಿಸಿ) ಅಬ್ಬಾಬ್ಬ! ನಿದ್ರೆ!

ಪಾಪ! ಹೀಗಾಗ್ತಾನೇ ಬಂದ್ರೆ ಎಷ್ಟ್ ದಿನಾ ತಡ್ಯತ್ತೇ ಈ ದೇಹ !?

[ಕೋಣೆಯನ್ನು ಬಿಟ್ಟು ಒಳಗೆ ಹೋಗಿ ಜರತಾರೀ ಅಂಚಿನ ಕಾಶ್ಮೀರ್ ಶಾಲೊಂದನ್ನು ಸೂಳೆಯ ನಿದ್ರೆಗೆ ಭಂಗಬರದಂತೆ ಹಗುರವಾಗಿ ಅವಳಿಗೆ ಹೊದಿಸಿ, ಮೂಲೆಯಲ್ಲಿರುವ ಜಮಖಾನವೊಂದನ್ನು ಸೋಫಾವಿನ ಕಾಲಿನಕಡೆ ಹರಡಿ, ಆರಾಮ ಕುರ್ಚಿಯೊಂದರಲ್ಲಿನ ದಿಂಬನ್ನು ಜಮಖಾನೆಯ ಕೊನೆಯಲ್ಲಿಟ್ಟು ಕೋಣೆ ಮೂಲೆಯಲ್ಲಿರುವ ಮೇಣದ ಬತ್ತಿಯನ್ನು ಹಿತ್ತಾಳೆಯ ಸ್ಟ್ಯಾಂಡ್ ಸಹಿತ ತಂದು ದಿಂಬಿನ ಪಾರ್ಶ್ವದಲ್ಲಿ ಇಟ್ಟು, ಕಿಸೆಯಿಂದ ತೆಗೆದ ಸಿಗರೇಟನ್ನು ಹಚ್ಚಿಕೊಂಡು, ಜಮಖಾನೆಯ ಮೇಲೆ ಮಲಗಿಕೊಂಡು ಸಿಗರೇಟನ್ನು ಸೇದಿ, ಸೂಳೆ ಮಲಗಿರುವ ಸೋಫಾವಿನ ತಳದಲ್ಲಿರುವ ಬಾಳಬಂದು ಲಿಪಿಯ ಭಗವದ್ಗೀತೆಯನ್ನು ತೆಗೆದು, ಆತ್ಮಗತಂ]

ಸಮೋಽಹಂ ಸರ್ವಭೂತೇಷು
ನಮೇದ್ವೇಷೋಽಸ್ತಿ ನ ಪ್ರಿಯಃ.

[ಎಂದು ಓದುತ್ತಿರುವ ಹಾಗೆಯೇ ತೆರೆಯು ಬೀಳುವುದು.]

———

*

# Act 2.

**Sc 1**

## ಹತ್ತು ವರ್ಷಗಳ ಅನಂತರ

[ಸ್ಥಳ — ಸೂಳೆಯ Sitting Room  ಕಾಲ: ಸಾಯಂಕಾಲ Discovered ಸುಬ್ಬು (aged **thirty nine**) and ಸೂಳೆ (aged **thirty four**) ಪುಟ್ಟಾ (aged **four**)

**ಸುಬ್ಬು** ಇವೇನ್ ಚಿನ್ನಾ ? ಬಂದು ಬಿಟ್ಟಿ ಇಷ್ಟು ಬೇಗ್ನೆ ? ಬ್ಯಾಂಡ್ ಆಗ್ಲೋಯ್ತೇ Cubbon Parkನಲ್ಲಿ ?

**ಸೂಳೆ** ಬ್ಯಾಂಡ್ ಕೇಳ್ತಿದ್ದೆ ನಂಬುತ್ತೀಯೋ ಇಲ್ಲವೋ ? ನಿನಗೆ ತಿಳಿದ ದೊಡ್ಡ ಮನುಷ್ಯರೊಬ್ರು ಒಂದು ವ್ಯಕ್ತಿ ಸಮೇತ ನೆಟ್ಟಗೆ ಎಲ್ಲರೆದುರ್ಗೆ ಬಂದ್ರು ನನ್ನ ವಿಕ್ಟೋರಿಯಾ ಹತ್ತಿರ . . ಯಾರಿರ್ಬಹುದು ಹೇಳು ಆ ಹೆಂಗ್ಸು ? .....ನೋಡೋಣ ನಿನ್ನ ಘಟ್ಟಿಗತನಾನ ?

**ಸುಬ್ಬು** ನನ್ನ ಘಟ್ಟಿಗ್ತನಾ ಇರ್ಲಿ ......ನೀನೇ ಹೇಳು.

**ಸೂಳೆ** ಲೇಡಿ ..

**ಸುಬ್ಬು .** (ಚಮಕಿತನಾಗಿ) ಯಾರು ? ಲೇಡಿ ಶಿವದಾಸಯ್ಯರ್ರೇ ?

**ಸೂಳೆ .** ಮತ್ತ್ಯಾರೋ ಮುಂಕು ! ಐವತ್ತು ವಯಸ್ಸು ! ಬೆಳ್ಳೀ ಕೂದ್ಲು. ಆದ್ರೂ ಹದ್ನೈದ್ ವರ್ಷ ತುಂಬದ ಹುಡ್ಗೀಗಿಂತ Sweet faceಉ . . ..ನಮ್ಮ ಪುಟ್ಟಾನ ನಗು........ . ನೆಟ್ಟಗೆ

ಬಂದು ಆ ರಾಮ್ರಾಯ ಅವನ ಉಬ್ಬಲ್ಲು ತುಂಬಿದ ಬಾಯಿಬಿಟ್ಟು 'Let me introduce" ಅಂತ ಶುರು ಮಾಡಿ ರೋವಾಗ್ಲೇ ಇವಳು ತನ್ನ ನನ್ನ ಕೈಗಳನ್ನು ಹಿಡ್ಕೊಂಡು (ಮುಖವನ್ನು ವಿಕಾರ ಮಾಡುತ್ತಾ) "ನಿಮ್ಮನ್ನು ನೋಡ್ಬೇಕೂ ಅಂತ ಅನೇಕ ದಿವಸ್ಗಳಿಂದ ನನಗಿತ್ತು ಆದರೆ ನಮ್ಮ City fathersಉ" ಈ ಮುನಿಸಿಪಾಲಿಟಿ Councillorsಉ ಸುಬ್ಬೂ! ಊರಿಗೆ ಅಷ್ಟೆಂದ್ರಂತೆ——"ನಮ್ಮ ಬೆಂಗಳೂರು ಮುನಿಸಿಪಾಲಿಟಿ Councillers ಮೂಲಕ ನಿಮ್ಮನ್ನು ನಾನು ಈವತ್ತು ಕಂಡದ್ದು ಬಹಳ ಸಂತೋಷ!" ಅಂದ್ಲು ನೋಡು ಸುಬ್ಬೂ ಅವಳೆಲ್ಲಿ! ನಾನೆಲ್ಲಿ! ಇವರಲ್ಲೇನೋ ಗೋಲನ್ ಇಥೇಂತ ಎತ್ಕೋತ ನನಗ್ ಗುಮಾನಿ "ಸಂತೋಷಾಮ್ಮಾ ನಿಂತ್ಕೊಂಡು ಯಾಕೆ ಮಾತಾಡ್ತೀರ ಒಳಕ್ಕ್ ಬಂದು ಕೂತ್ಕೊಳ್ಳಿ ಇಬ್ಬರಿಗೂ ಸ್ಥಳ ಇದೆ ವಿಕ್ಟೋರಿಯಾಲೀ!" ಅಂದ ಅಷ್ಟತ್ಲೂನ ಸುಬ್ಬೂ ಆತ "ಈಗ ಜಾಸ್ತಿ ಟೈಮ ವಿಲ್ಲ ಲೇಡಿ ಉಪಾಧ್ಯಾಯರ್ರಿಗೆ Prostitution questionನಲ್ಲಿ interest ಇಥ ಅದ್ನ ನಿಮ್ ಜೊತೇಲಿ ಮಾತಾಡೋಕೆ ಬರ್ಬೇಕೂಂತಿದ್ರು" ಅಂತ ಹೇಳ್ತಿದ್ದಾಗ್ಲೇ, ಆ Prostitution ಅಂಬೋ ಪದ ಕೇಳತ್ಲೂನೇ, ಸುಬ್ಬೂ ನನ್ನ ಮೈ ಉರಿಎದ್ದ್ಬಿಟ್ಟೆ, ನನ್ನ ಕಣ್ಣುಗಳು ಕಾರ್ತಿದ್ದ ಕಿಡಿ ಕಂಡೋ ಏನೋ ಕಾಣೆ ಮುಖ ತಿರುಗಿಸ್ಕೊಂಡ ಆತ ಅವನಿಗಡ್ಡ ಮಾತಾಗಿ ಆಕೆ ನನ್ ಪುಟ್ಟಾನ ಧ್ವನಿಯಿದೆ ನೋಡು ಆದಕ್ಕಿಂತ ನಯವಾಗಿ "Do not mind him ಏನು ಆದರೂ ಅವರು ಗಂಡಸರು ಅವರಿಗೆ ಹೆಂಗಸಿನ delicacy" ಅಂತ ಅದೇನೋ ಇನ್ನೂ ಸ್ವಲ್ಪ ಇಂಗ್ಲಿಷ್ ಹೇಳ್ಕೊಂಡು ಒಟ್ನಲ್ಲಿ "ರೇಗ್ಬೇಡಿ! ಸೂಳೆಗಾರ್ಕೆ ನಮ್ಮ ದೇಶಕ್ಕೆ ." ಅದೇ ನೀ ಕೊಟ್ಟ ಲೆಕ್ಚರ್ ಸಾರಾಂಶ.. ಅದೆಲ್ಲಾ ಶುಷ್ಕವಾಗಿ ಹೇಳಿ .. ಅದ್ನ ನಿಲ್ಸೋ ಬಗೆ ನನ್

ಜೊತೇಲಿ ಮಾತಾಡಿ ನಿರ್ಧರಿಸೋಕೆ ನಾಳೆ ಬೆಳಿಗ್ಗೆ ಒಂಬತ್ತ್ ಗಂಟೆ ಹೊತ್ಗೇ ನಮ್ಮನೇಗ್ ಬರ್ತಾಳಂತೇ! ಬೆಳಿಗ್ಗೆ ಅಷ್ಟ್ ಹೊತ್ಗೇ ಎದ್ದು, ಹೂವು, ಹಣ್ಣು, ಹಂಪಲು, ಅಡಿಕೆ, ಎಲೆ, ಕುಂಕುಮ, ಹಸೀಅರಿಷ್ಣ ಅಮ್ಮನ ಪೂಜೇ ಸಾಮಾನ್ನಿಂದ ಬಾಚಣ್ಗೆಂಬಂಪು ಎಲ್ಲಾ ತಂದು ಮೂರು ಬೆಳ್ಳೀ ತಟ್ಟೆ ತುಂಬ ತುಂಬಿ, ಅವಳ್ ಹೋಗೋವಾಗ ಅವ್ಳ್ ಕಾರ್ ತುಂಬ ಪೇರ್ಸಿ Pack off ಮಾಡ್ಬೇಕು, ಅಲ್ವೇ ಸುಬ್ಬು! ಮನೇಲಿರೋದು ಸಾಲ್ದಿದ್ರೆ ಬ್ಯಾಗ್ನಲ್ಲಿ ನೀನ್ ಹಾಕಿದ್ ದುಡ್ಡು ಹಾಗೇ ಇಧೆ! ಅದೂ ಸಾಲ್ದಿದ್ರೆ ಕೈಪಟ್ಗೆ ಬೀಗದ ಕೈ ನನ್ನ ಹತ್ರಾನೆ ಇಧೆ! ಆವಳ್ ಗಂಡ್ನ ಅಂತಸ್ತಲ್ಲಿ ನಾವಲ್ಲ! ಇಷ್ಟಕ್ಕೂ ಮಕ್ಳೆಲ್ಲಾ I C S ಒಬ್ಬ ಇನ್ನೂಬ್ಬ್ನೆಲ್ಲೋ ದೂಷ್ಕಲ್ಸ ಹೆಣ್ಮಕ್ಕಳ್ನೆಲ್ಲಾ ದೊಡ್ಡ್ ದೊಡ್ಡ್ ಕಡೇ ಕೊಟ್ಟಿದ್ದಾರೆ ಸಂತೋಷ್‌ವಾಗಿ "ನಾವಾಯು ನಮ್ ಬಂಗ್ಲೇ ಆಯ್ತು ನಮ್ಸ್ಮುಖ ನಮ್ಮದಾಯ್ತು"! ಅಂತೆ ಇದ್ರ ಈ ವಯ್ಸಿಣಿಗ ಈ ವಯಸ್ನಲ್ಲಿ ತಾನು ಸುಖವಾಗಿದ್ರೂ ದೇವ್ರು ಎದುರ್ಗ ತನ್ನ ಹಾಗೇ ಹಂಗಸ್ರಾಗಿ ಹುಟ್ಟಿ ನರಳ್ತಿರೋ ನನ್ನಂಥಾವ್ರ ಯೋಚ್ನೆ ತಗಲಿರೋ ಈ ಹುಚ್ಚು ಯಾಕ್ ಹುಟ್ಟಿದ್ಯೋ ಕಾಣೆ ಮುಖ್ಯ ದೇವ್ರು ಸೃಷ್ಟಿ ವಿಚಿತ್ರ!! ಮರೀಬೇಡ ದೊಡ್ಡ ಬೀರು ಬೀಗದ್ ಕೈ ನಿನ್ನ ಹತ್ರಾನೇ ಇಲ್ವೇ? ಬೆಳಿಗ್ಗೆ ಏಳತ್ತೂಲ್ಲ ತಟ್ಟೆ, ಪನ್ನೀರ್‌ದಾನಿ, ಗಂಧದ್ ಬಟ್ಲು ಎಲ್ಲಕ್ಕೂ SILVO ಹಾಕಿ ಎಂಟ್ ಗಂಟೆ ಅಷ್ಟೊತ್ಗೇ ಸಿದ್ಧವಾಗಿಡಬೇಕೂಂತ ನಂಜನ್ಗೆ ಹೇಳ್ಬಿಟ್ಟು ನೀನ್ ಗಾಡೀಲಿ ಹತ್ಕೊಂಡ್ ಹೋಗಿ, ಮಾರ್ಕೆಟ್ನಿಂದ ಎಂಟೂವರೇಗೆ ಇಲ್ಲಿರ್ಬೇಕು ಆಕೆ ಬರೋದು ಒಂಭತ್ತುಂಟೆ ಮರೀಬೇಡ! ಪುಟ್ಟು ಎಲ್ಲೀ?

**ಸುಬ್ಬು** ಶನಿವಾರ ಸಾಯಂಕಾಲ ಯಥಾಪ್ರಕಾರ ಮುನಿಸಿಪಲ್ ತೋಟ Pramಊ

ಸೂಳೆ ಜೊತೇಲಿ ?

ಸುಬ್ಬು ನಂಜ

ಸೂಳೆ ಅವ್ಳು ?

ಸುಬ್ಬು ಅವ್ಳೂ ಯಥಾಪ್ರಕಾರ ಶನಿವಾರ ಬೇರೆ ಈ ವಾರ! ಆಂಜನೇಯನ್ ಗುಡೀಗೆ!

ಸೂಳೆ : ಇದ್ಯಾಕೋ!! ಅವ್ಳಿಗ್ನೆ ಯಾಕೋ ಒಂದೊಂದ್ ಶನಿವಾರಾನೂ ಒಬ್ಬೊಬ್ಬ ಹೊಸ ದೇವ್ರು! ಅವಳ ಅಯ್ಯೆರು ಶನಿವಾರದ್ದೇವ್ರು, ಶನೇಶ್ವರನ್ ಗುಡೀನೇ! ಹಾಗೂ ಇಥೆಯೋನೋ ಒಂದ್ಗುಡಿ ?

ಸುಬ್ಬು ಶನೇಶ್ವರನ್ಗೆ ಗುಡೀನೇ ? ಪ್ರಾಕಾರ ಕಟ್ಟಿ ಒಳಗೆ ಪೆಟ್ಟಿಗೆ ಹಾಗೆ ಭದ್ರವಾಗಿ ಇಡೋದು, ಎಲ್ಲಾ ದೇವರ ಗುಡಿಗಳ್ನ! ಶನೇಶ್ವರನ್ ಗುಡಿ ಈ ಲೋಕ್‌ಲೋಕಾನೇ! . ಪ್ರಾಕಾರ ಎಲ್ಲಿದಕ್ಕೇ. (ಇಬ್ಬರೂ ನಗುವರು)

[ ತೆರೆ ]

———

## Scene 2

[ಸ್ಥಾನ ಯಥಾಪೂರ್ವಂ ಕಾಲ ಬೆಳಿಗ್ಗೆ ಒಂಭತ್ತು ಘಂಟೆ Discovered ಸೂಳೆ, ನಾಲ್ಕು ವರ್ಷ ವಯಸ್ಸಿನ ಮತ್ತು pramನಲ್ಲಿ ಕುಳಿತಿರುವ ಪುಟ್ಟಾ, ಎರಡು ಹೆಜ್ಜೆ ಹಿಂದೆ ನಂಜಾ ಮತ್ತು 'ಬಾ ಮಗು' ಎಂದು ಕೈ ಚಾಚಿ ಪುಟ್ಟಾವನ್ನು ಕರೆಯುತ್ತಿರುವ ಲೇಡಿ ಶಿವದಾಸ ಅಯ್ಯರ್ ]

**ಸೂಳೆ** ಅಯ್ಯೋ! ಹಾಗ್ ಬರೋದಿಲ್ಲಾಮ್ಮಾ ಅವಳು! ಹೊಸಬ್ರು ಕರದ್ರೆ ಹಟ ಜಾಸ್ತಿ, ಹಂದಿ ಪಿಗ್ಗೂ piggoo ಅಂತಾರಲ್ಲಾ ಹಾಗೆ

**ಲೇಡಿ ಶಿವದಾಸಯ್ಯರ್** ಯಾಕೆ ಗಂಭೀರ್ವಾಗಿ Little Lady ಹಾಗೆ ಕೂತಿದ್ದಾಳೆ [ಪುನಃ ಬಾಹುಗಳನ್ನು ಚಾಚುತ್ತಾ] ಬಾಮ್ಮಾ ಬಾ! ಬೆದರ್‌ಬೇಡ ಬಾ!

**ಸೂಳೆ** ಹಯ್ಯೋ! ಹಂದೀಂದ್ನಲ್ಲಾಮ್ಮಾ ಅದು ಈಗೇನೋ ಇಂಗ್ಲಿಷ್ ಗೊಂಬೆ! ರೆಪ್ಪೆ ಮುಚ್ಚದ್ದಾಗೆ ಕಣ್ಣುಗುಡ್ಡೆಗಳ್ನ ಬಿಟ್ಕೊಂಡು ಹೊಸ್ದಾಗ್ ಬಂದ ನಿಮ್ಮನ್ನ ಗಂಭೀರ್ವಾಗಿ ನೋಡ್ತಿದ್ದಾಳ್ಯೇ ಹೊರ್ತು, ನಾಳೆ ಬೆಳಿಗ್ಗೆ ನೋಡ್ಬೇಕು ಅವಳ್ನ! Frockನ ಕಿತ್ತ್ಸುಟ್ಟು . . ಬೆತ್ತ್ಲೆಮೈ ಬಿಟ್ಕೊಂಡು ಈ ಬೀದಿ ಎಲ್ಲಾ ಓಡಾಡ್ತಾ ಒಬ್ಬೊಬ್ಬ ಮಗೂನ್ನೂ ಪರ್ಚಿ ಅವುಗ್ಳ ಕೈಲೂ ಪರ್ಚಿಸ್‌ಕೊಂಡು ಒಂದ್ ಚರಂಡಿ ಒಂದ್ ಎಂಜಲ್ ತೊಟ್ಟೀ ಬಾಕೀ ಇಲ್ದೆ ಬಿದ್ದು ಹೊರಳಾಡಿ ಮನೇ ತಪ್ಪಿಸ್ಕೊಂಡದ್ದಕ್ಕೆ ನೆಪಾಂತ ಯಾವುದಾದರೂ ಬ್ಯಾಂಡ್ ಬಾರ್ಸೋ ಜಟ್ಕಾದ್ ಜೊತೇಲಿ ದೊಡ್ಡ ಬೀದಿಯುದ್ದಕ್ಕೂ ಓಡಿ ಒಂದು ಸಿನಿಮಾದ್ನೋಟೀಸೋ ಇಲ್ಲ ನಾಟಕದ್ನೋಟೀಸೋ ಬಿದ್ದದ್ನ ಕಸ್ಕೊಂಡ್ ಮನೇಗ್ ಬಂದ್ ಸೇರೋವಾಗ್....ಈಗ ನೀವ್ಹೇಳೋ "Little Lady" ಅಲ್ಲ? "ಈ ಸಾಧು ಬೆಕ್ಕಿನ್

ಪಿಳ್ಳೆ ಈ ಹಾಲ್ನ ನಿಜ್ವಾಗಿ ಕುಡ್ಡಿದ್ದೀತೆ?" ಎಂಬೋ ಮೂರ್ತೀನ್ ಇಟ್ಕೊಂಡೂ (ಪುಟ್ಟುವಿನ ಧ್ವನಿಯನ್ನು ಅಣಕಿಸುತ್ತಾ) "ನೋಟೀಸ್ ತಂದೇವ್ಮಾ, ನಿನ್ಗೆ ನಾಟ್ಕದ್ದು!!" ಅಂತ ಏಳ್ ಗಂಟೀಗೆ ಕಾಫಿ ಕುಡ್ದು ಮನೇ ತಪ್ಪಿಸ್ಕೊಂಡೋಳು ಹತ್ತ್ ಗಂಟೀಗೆ ಬಂದ್ ನಿಲ್ತಾಳೆ! ಚನ್ನಾಗಿ ಹೇಳಿದ್ರಿ "Little Lady"ಈ ಅಂತ! [ಪುಟ್ಟುವನ್ನು pramನಿಂದ ಹೊರಕ್ಕೆತ್ತಿ ನಿಲ್ಲಿಸುವಳು]

**ಲೇಡಿ ಶಿವ** (ಮಗುವಿನ ಗಲ್ಲವನ್ನು ಮುಟ್ಟಿ ತಲೆಯನ್ನು ಸವರುತ್ತಾ ಮಾತಾಡ್ತಾಳ್ಯೇ?

**ಸೂಳೆ** ಸ್ಪಷ್ಟವಾಗಿ ಬೊಗಳ್ತಾಳೆ ಬೈಗ್ಳಾದ್ರೆ! ಸಂಜನ್ನ, ಸುಬ್ಬೂನ, ನನ್ನೂ ಬಿಡ್ದೆ!! ಮೈಸೂರ್ ಕಾಸ್ ಬಂಗ್ಲೆ ಇವಳ್ಗೆ ತೋರಿಸ್ದಾರಭ್ಯ ಅಲ್ಲಿರೋ ಮೃಗಪಕ್ಷಿಗಳ್ನ ಅವಳ ಹಾಳು ಕಣ್ಣುಗ್ಳಿಂದ ಗಮನಿಸಿ, ಈಗ ನಮ್ಮ ಮನೇಲಿರೋರ್ಗೆಲ್ಲಾ ಆಯಾ ಮೃಗ ಜಂತು ಪಕ್ಷಿಗ್ಳ ಹೆಸ್ರೇ ಇಟ್ಟಿದ್ಧಾಳೆ! (ಪುಟ್ಟುವನ್ನು ಕುರಿತು) ನಾನ್ ಯಾರೇ?

**ಪುಟ್ಟು** ಹುಲೀವ್ಮಾ!

**ಸೂಳೆ :** ಯಾಕೇ!?

**ಪುಟ್ಟು** ಯಾಕೇನಮ್ಮಾ? ....ಹುಲೀನೇ!

**ಸೂಳೆ :** ನೋಡಿದಿರಾವ್ಮಾ ....ಹ್ಯಾಗೆ ಗಮನಿಸ್ತವೆ ಮಕ್ಕಳು (ಪುಟ್ಟುವನ್ನು ಕುರಿತು).... ...ಅಜ್ಜೀ?

**ಪುಟ್ಟು** ರಣಹದ್ದು! ಕೇಳೋದೇನಮ್ಮಾ . ..ಸುಬ್ಬೂ .......ಜಿಂಕೆ ಅಲ್ಲ ..........ನಮ್ಮೆಲ್ರನ್ನೂ ನೋಡ್ಕೊಳ್ತಾ ಹಾಲು ಕೊಡೋ ಹಸು!

ಸೂಳೆ ಹೀಗೆಲ್ಲಾ ಜೈಯ್ಯೋ ಮಾತುಗ್ಳು ಮಟ್ಟಿಗೂ ಸ್ಪಷ್ಟ! ಸಾಧಾರಣ ಸಂಭಾಷಣೆಯೋ ಕೊಚ್ಚೆ! ಈ ಸಂಭ್ರಮದಲ್ಲೋ ಸುಬ್ಬು ಹೇಳ್ದ ಸಂಸ್ಕೃತ ನಮ್ಮ ನ್ಹೆಹಿತ್ರು ಸೂಸ್ದ ಇಂಗ್ಲೀಷೂ ಕಲಸುಮೇಲೋಗರ ಆಗಿ [ಪುಟ್ಟಾನಿಗ] ಹೇಳೇ! ಮಾಯಾ ಹಿಡಂಬೀ "ಮಾತಾ" !?

ಪುಟ್ಟಾ ಮಾಟಾ ನ್ಯಾಸ್ಟಿ ಪಿಟಾ ನ್ಯಾಸ್ಟಿ ನ್ಯಾಸ್ಟೀ ಬಂಡು

ಸೂಳೆ (ಅಡ್ಡವಾಗಿ ಪುಟ್ಟಾನ ಬಾಯನ್ನು ಕೈಯಿಂದ ಮುಚ್ಚಿ ನಗುತ್ತಾ) ಸಾಕೇ! ಸಾಕು ನಿನ್ನ nasty! ನೋಡೀಮ್ಮಾ ಇವಳ ಕಣ್ಗೆ ನಮ್ಮನೇಲಿರೋರೆಲ್ಲಾ, ನಮ್ಮನೇಗ್ ಬರೋರು ಒಬ್ಬೊಬ್ರೂ ಇಂಗ್ಲೀಷ್‌ನಲ್ಲೂ ಸಂಸ್ಕೃತದಲ್ಲೂ ಪ್ರಾಜ್ಞರು ಅಂತ ನನಗ್ ಕಂಡ್‌ಬಂದ್ರೂ ಪುಟ್ಟನ್ ಕಣ್ಣಿಗೆ ಬಾಯಿಗೆ nasty!!

ಕರ್ಕೊಂಡ್ಹೋಗೋ! (ನಂಜನು ಪುಟ್ಟಾವನ್ನು ಎತ್ತಿಕೊಂಡು ಎಡಗೈಯಿಂದ ಬಂಡಿಯನ್ನು ಎಳೆದುಕೊಂಡು ಕೋಣೆಯ ಹಿಂದಿನ ದ್ವಾರದಿಂದ ನಿಷ್ಕ್ರಮಿಸುವನು).

ಕೂತ್ಕೊಳ್ಳೀಮ್ಮಾ! ಈ ಪಟಿಂಗಿಯ ಪುರಾಣಾ ಹೇಳೋ ಗಲಾಟೀಲಿ ನಿಮ್ಮಾ ಹಾಳ್‌ಕೊಂಪೇಗ್ ಬಂದು, ನಿಮ್ಮಂಥಾ ಪುಣ್ಯವಂತರ್ಗೆ ನನ್ ಕೈಯಿಂದ ಆಗೋ ಅಲ್ಪ ಸ್ವಲ್ಪ ಆತಿಥ್ಯ ಮರ್ಯಾದೇನೂ ಮರ್ತ್ ಬಿಟ್ಟೆ ಆದ್ರೇನು ಮಕ್ಕಳ್ ಹೆತ್ತೋರು ನೀವೂನೂ! ನಿಮಗ್ ಅರ್ಥವಾಗುತ್ತೆ ಕೂತ್ಕೊಳ್ಳೀ [ಪಕ್ಕದಲ್ಲಿರುವ Chesterfieldನ್ನು ಸೂಚಿಸಿ ಆಕೆಯು ಕೂಡುತ್ತಲೂ ಪಕ್ಕದಲ್ಲಿರುವ ಕುರ್ಚಿಯಲ್ಲಿ ತಾನೂ ಕೂಡುವಳು].

ನೋಡೀಮ್ಮಾ (Sweeping her right arm to the Gods and Goddesses swung right around above her head) 'ನಿಮ್ಮ ಬಂಗ್ಲೆಗಳಲ್ಲಿ ಗೋಡೇಗ್ ತಗ್ಲ್‌ಹಾಕೋ ಸೀತಾ

ಸಾವಿತ್ರಿಗ್ಳು ಪರಗಳ್ನೇ ನಮ್ಮ್ ಮನೇಲ್ಲೂ ಗೋಡೇಗ್ ತಗ್ಲ್ ಹಾಕ್ಕೊಂಡಿರೋದು ಮನ್ತನ್ದ ಮಾಮೂಲು ಇದೊಂದೇ ನಮ್ಮಿಬ್ರ ಬಾಂಧವ್ಯ ನೀವೆಲ್ಲೀ ? ನಾವೆಲ್ಲೀ? ಸಮಾಜದಲ್ಲಿ !?! ನೀವು ನನ್ನೀ ಕೊಂಪೇಗ್ ಬಂದಿದ್ದು ಬೆಳಕ್‌ಕಾಣ್ದ ಬಡವರ ಬಿಲಕ್ಕೆ ಸೂರ್ಯನಾರಾಯಣ್‌ನೇ ಹೊಕ್ಕ್ಹಾಗೆ ! ನಮ್ಮೀ ಸಮಾಜದ ವ್ಯವಸ್ಥೇಲಿ ಪಾಪಿಗಳು ಅಂಬಾ ದರ್ಶನಕ್ಕೆ ಗುಡೀ ಗ್ಹೋಗೋದು ಸಹಜಾಮ್ಮಾ ಏನ್ ಹೇಳಿದ್ರೂನೂಮ್ಮಾ ನಿಮ್ ಚರಿತ್ರೆ ನನಗೇನೂ ನಮ್ಮ ದೇಶಕ್ಕೆಲ್ಲಾ ಬೆಳಕೂಮ್ಮಾ ! ನಿಮ್ಮ್ ಗೃಹದಲ್ಲಿ ನಿಮ್ಮ ದರ್ಶನಕ್ಕೆ ನಾನ್ ಬರೋದು ಈ ಸಮಾಜ್ದ ಈ ಸ್ಥಿತೀಲಿ ಸಾಧ್ಯವೇಮ್ಮಾ ? ನನಗಿರೋ ಆಶ್ಚರ್ಯ ಪರಮಾತ್ಮನ್ ಕೃಪೆಯಿಂದ ನನ್ನ ಗೃಹದಲ್ಲೇ ತಮ್ಮ ದರ್ಶನ ಆದದ್ದು, ಆತನ ಕೃಪೆಯೋ ತಮ್ಮ ಕರುಣೆಯೋ .. . . ನನಗೊಂದೂ ತೋಚೋಲ್ಲಾ ! ಇಹಪರಗ್ಳೆರಡ್ರ ಗತೀನೂ ಸೊನ್ನೆಯಾಗಿರೋ ನಾನು ನನ್ನ್ ಕಸುಬನ್ನ ಸಲ್ಲಿಸೋ ಸೂಳೇರು ನಮ್ಗೂ ಸಮಾಜಕ್ಕೆಲ್ಲಾ, ಗರತಿಯರು ಕ್ಷಮ್ಸಿ .ಸಂಸಾರಿಗ್ಳು ಇವರಿಗೆ ಮೇಲ್ಪಂಗ್ತಿಯಾಗಿರೋ ತಮ್ಗೂ ಸಂಬಂಧ (Sweeps her forefinger, pointing out the pictures swung amid the ceiling and the floor) ಈ ದೇವ ರುಗ್ಳು !! ಈವತ್ತು ತಾವು ಇಲ್ಲಿ ಬಿಜಯಮಾಡಿದ್ದ್ರ ಅರ್ಥ ನನಗಿನ್ನೂ ಗೊತ್ತಾಗ್ಲಿಲ್ಲ .. ..... ನೆನ್ನೆ ಸಾಯಂಕಾಲ ಈ Prostitution ಇಂಗ್ಲೀಷು..... ..“ಸೂಳೇಗಾರ್ಕೆ” . ನಮ್ಮ ಭಾಷೆ ! ಈ ಬಾಬ್ತು . ?

**ಲೇಡಿ ಶಿವ** ನೋಡೀ ! ನಮ್ಮ ಯೆಜಮಾನ್ರೂ.......ದೊಡ್ಡ ಕೆಲಸ ದಲ್ಲಿದ್ರೂನೂ.... ...ದೊಡ್ಡ ಮನುಷ್ಯರ ಹೆಂಡ್ತಿಗ್ಳು ತಾವೂ ಸಮಾಜಕ್ಕೋಸ್ಕರ ಕೆಲಸಮಾಡಬೇಕೂ ಅಂತ ಹೇಳಿದ ಪ್ರಕಾರ, ನಮ್ಮೂರಿನಲ್ಲಿ ಇರುವ ದೊಡ್ಡ ಮನುಷ್ಯರ ಹೆಂಡ್ತೀಗ್ಳೆಲ್ಲಾ....

ನಮ್ಮ ಗಂಡಂದಿರು ಎಲ್ಲರೂ ನಾವು ಸಂತೋಷವಾಗಿದ್ದರೂ ನಮ್ಮ ಗಂಡಂದಿರ ಕೆಲಸ, ಸಂಬಳ ಇಲ್ಲದ ಗಂಡಸರ ಹೆಂಡತಿಯರನ್ನು ಸಹೋದರಿಯರಾಗಿ ಭಾವಿಸಿ ಅವರಿಗೆ ಸಹಾಯವನ್ನೂ ಮಾಡುವ ಸಂಘ ಒಂದು ಏರ್ಪಡಿಸಿ ಗಂಡಸರೇ ಇಲ್ಲದೆ ಸಮಾಜಕ್ಕೆ ದೇಹಾನ ಅರ್ಪಿಸಿ ಜೀವಿಸುವ ಸೂಳೆ ಕ್ಷಮಿಸ್ಸಿ ! ನಿಮ್ಮ "Little Lady" ಯನ್ನೂ ನಿಮ್ಮನ್ನೂ ನೋಡಿದ ಮೇಲೆ ನೀವು ಎಷ್ಟಾಗಿದ್ದರೂ ನಿಮ್ಮ ಬುದ್ಧಿ ಚೈತನ್ಯ ಇಲ್ಲದ ನಿಮ್ಮ ನಮ್ಮ (grasping ಸೂಳೇ's hand vehemently) ಸಹೋದರಿಯರಾದ ಇತರರಿಗೆ ಸಹಾಯ ಮಾಡುವುದಕ್ಕೇನೇ ನಾನು ನಿಮ್ಮನ್ನು ನಿನ್ನೆ ಸಾಯಂಕಾಲ Cubbon Parkನಲ್ಲಿ meet ಮಾಡಿ appointment fix ಮಾಡಿ ಈಗ ಬಂದಿರೋದು !

ಸೂಳೆ ಏನ್ಸಹಾಯ ಮಾಡೀರಮ್ಮಾ ನೀವಾಗ್ಲೀ, ತಾವು ಹಿಂದೆ ಕುಳಿತು ನಿಮ್ಮನ್ನು ಮುಂದೆ ದಬ್ಬಿದ ನಿಮ್ಮ ಕಮಿಟೀ ಆಗ್ಲೀ ? ಅಲ್ಲಮ್ಮಾ ! ನಾವೆಲ್ಲಾ ಸಹೋದರಿಯರೂಂತ ನೀವು ಹೇಳಿದರೂ ಭೂಲೋಕದ ಸ್ವರ್ಗದಲ್ಲಿರೋ ಸೀಟುಗಳೆಲ್ಲಾ high societyಗೆ Reserve ಆಗ್ಹೋಗಿ ನಮ್ಮ ಗತಿ ಈ ಲೋಕದಲ್ಲೇ ನರಕಾ ! ಇಹಪರಗಳೆರಡರ ಗತೀನೂ ಸೊನ್ನೆಯಾಗಿರೋ ನನಗೂ ನನ್ನಂಥ ಲಕ್ಷ ಲಕ್ಷ ಹೆಂಗಸರಿಗೂ ಏನ್‌ಸಹಾಯ ಮಾಡೀರಮ್ಮಾ ?

ಲೇಡಿ ಶಿವ ನೀವೇನೋಮ್ಮಾ ನೀವು ! ಆದ್ರೂ ನಿಮ್ಮ ಪುಣ್ಯ ಪ್ರಭಾವ ಇಲ್ದೆ ಹೊಟ್ಟೇಗೆ ಹಿಟ್ಟೂ ಮಲಗೋಕ್ ಸೂರೂ ಬೇನೆಗೆ ಔಷಧ್ವೂ ಇಲ್ದೆ ನಿಮ್ಮ ನಮ್ಮ ಹಾಗೆ ಹೆಂಗಸ್ರಾದ ಸಹಸ್ರ ತಂಗಿಯರ್ಗೆ ಸಹಾಯ ನಾನಾಗ್ಲೀ, ನನ್ನನ್ನ್ ಮುಂದಿಟ್ಟಿರೋ ಕಮಿಟಿಯಾಗ್ಲಿ, ನೀವ್ಹಾನೇ ಆಗ್ಲಿ .......ನಾವೆಲ್ರೂವೇ ಏಕಮನಸ್ಕರಾಗಿ ಸಹಾಯಮಾಡ್ಬೇಕು .. .ಅಂಬೋ ಉದ್ದೇಶ ತಪ್ಪೇ ? ಹೆಂಗ್ಸೂ ಮಕ್ಕಳ್ನ ಹೊತ್ತೂ, ಹೆತ್ತೂ ತಾಯಿಯಾ

ಗೋದೇ ಪ್ರಕೃತಿಯ ನಿಮಿತ್ತ! ಪೃಥಿವಿಯ ಅನಂತತ್ವ! ನನಗೂ ನಿಮ್ಮ ಪುಟ್ಟಾ ವಯಸ್ಸು ಮಗಳು ಇಧಾಳೆ! ಆದ್ರೂ ನಿಮ್ಮ ಪುಟ್ಟಾ ಮುಖಾ ನಿಮ್ಮ ಸುಂದರ ಮುಖದ ಹಾಗೇ! ಮೂಗೂ ಕಣ್ಣು ನಿಮ್ಮ ಹಾಗೇ! ಅಲ್ಲ ಆದರೂ— "ಅಲಮೇಲು" ಅವಳ ಹೆಸರು—ಆದ್ರೂ ನನಗೆ ನಿಮ್ಮ ಪುಟ್ಟಾ ನಿಮಗೆ ಹ್ಯಾಗೋ ನನಗೆ ಅವಳು "ಸೂಳೆ!" "ಸಂಸಾರಿ!" ಇದೆಲ್ಲಾ ಸಮಾಜ ತನ್ನ "ಜ್ಞಾನ" "ಅಜ್ಞಾನ"ದ ಆವೇಶದಲ್ಲಿ ಸ್ತ್ರೀಯರಿಗೆ ನಿರ್ಣಯಿಸುವ "ವೇಷ"! ಸೂಳೆಯಾಗ್ಲೀ! ಸಂಸಾರಿಯಾಗ್ಲೀ! ಮುಖ್ಯ ಸ್ತ್ರೀ ಸ್ತ್ರೀನೇ! ಆದ್ರೆ ಸಂಸಾರ್ದಲ್ಲಿ ತಾನು ಅನುಭವಿಸೋ ಸುಖಾನ ಮರೆತು ಆ ಸುಖಗ್ಳ ಇಲ್ಲದ ಸಹೋದರಿಯರಿಗೆ ಸಹಾಯ ಮಾಡಲೇಬೇಕೂಂತ ಹತ್ತೆಂಟು ಹೆಂಗಸ್ರು ಸೇರಿ ನಿರ್ಧರಿಸಿ ನಿಮ್ಮಂಥಾ ಹೆಸರು ವಾಸಿ ಆದೋರ್ನ ಹ್ಯಾಗೇ ಯಾವ ವಿಧವಾಗೀ ನಮ್ಮ ಸಹೋದರಿಯರಿಗೆ ನಮ್ಮಿಂದ ಆಗುವ ಅಲ್ಪಸ್ವಲ್ಪ ಸಹಾಯಾನ ಮಾಡ್ಲೇ ಬೇಕೂ ಅಂತ ಸಂಘದ ಕಮಿಟಿಯವರು ನನ್ನನ್ನ, ನಿಮ್ಮನ್ನ Consult ಮಾಡೋಕೆ ಕಳ್ಸಿದ್ದು ತಪ್ಪೇ?

**ಸೂಳೆ** ತಪ್ಪಲ್ಲ! ಆದ್ರೆ . ಒಂದೇ ಒಂದು ಮಾತು! ನೀವ್ ಹೇಳೋದೇನೂ ಈ ಮಾಯಾ ಪ್ರಪಂಚದಲ್ಲಿ ಗಂಡ್ಸಾಗ್ಲೀ, ಹೆಣ್ಣಾಗ್ಲೀ, ಸೂಳೆಯಾಗ್ಲೀ, ಗರ್ತಿಯಾಗ್ಲೀ ಹುಟ್ಟಿದ ಕಾರಣ ಸಮಾಜದ ಭಾರವಲ್ಲ! ಆಯಾ ವ್ಯಕ್ತಿಯ ಭಾರ! ಅಂತ ಆದ್ರೂನೂವೇ ನನ್ನ ಕಸ್ಬಿಗ್ ತುತ್ತಾದ ನನ್ನ ತಂಗಿಯರ್ಗಿರೋ ಆಹಾರ, ನಿದ್ರಾ, ಭಯ, ಮೈಥುನ ಇತ್ಯಾದಿ ತಿರ್ಯಕ್ ಚತುಷ್ಟಯಗಳನ್ನ ಅರಿಯುತ್ಲೂನೂವೆ—ನೀವಾಯ್ತು ನಿಮ್ಮ ಚತುಷ್ಟಯಗಳಾಯ್ತು ನಾವಾಯ್ತು .ನಮ್ಮ ಚತುಷ್ಟಯ ಗಳಾಯ್ತೂಂತ. .. ...

**ಲೇಡಿ ಶಿವ :** ಅರ್ಥವಾಗ್ಲಿಲ್ಲ ......ನೀವ್ಹೇಳೋದು?

**ಸೂಳೆ** ಅರ್ಧಾಂಗಿಗ್ಳಲ್ವೇ ? ನಮ್ಮ ಹಾಗ್ಯೇ ಗರ್ತಿಯರೂ ಕ್ಷಮ್ಸಿ! ಸಂಸಾರಿಗಳೂ ತಮ್ಮ ಆಹಾರ. ತಮ್ಮ ನಿದ್ರೆ, ತಮ್ಮ ಪ್ರಾಣಭಯ, ತಮ್ಮ ಮೈಥುನ ಇವುಗಳಿಗೋಸ್ಕರ ಒಬ್ಬ ಗಂಡಸ್ನ ಹಿಡ್ದು ಸಂಸಾರ ಮಾಡೋದೂನೂವೇ "ಒಂದ್ ಕಸ್ಬೂ" ಅಂತ—"ಅದು ಗರತಿಯರ ಕಸುಬೂ!" ಅಂತ ನಾನು ಹೇಳ್ತೀನೆ! ವಾದಿಸ್ತೀನೆ ನಿರ್ಧರಿಸ್ತೀನೆ! ನಿಮಗೆ ಹೂಂದಿಸ್ತೀನೆ ಈ ನಿಮ್ಮ ಗರ್ತಿ ಕಸಬ್ನಲ್ಲಿ ಮೂವತ್ತೂ ತುಂಬ್ದೆ ತಿಂಗ್ಳಿಗೆ ಹತ್ತ್ರೂಪಾಯ್ನೂ ಸಂಪಾದ್ನೋಕೆ ಯೋಗ್ಯತೆ ಇಲ್ದ ಗಂಡನ ಕೈನೂ ಹಿಡ್ದು, ಒಂದು ಕಸ್ಬ್ನ ಸಮಾಜದಲ್ಲಿ ಸಂಪಾದಿಸದ ಅವನ್ನೂ ಹನ್ನೊಂದ್ನೇ ಮಗುವಾಗಿ ಭಾವಿಸಿ, ಆ ಹತ್ತೇ ರುಪಾಯಿ ಸಂಬ್ಳದಲ್ಲಿ ಮನೇ ಬಾಡ್ಗೇನೂ ತೆತ್ತು ಮನೇಲಿರೋರ ಹೊಟ್ಟೇನೂ ತುಂಬಿ ತನ್ನ್ನ ಹೊಟ್ಟೆ ಮುಖ ಕಣ್ಣುಗ್ಳು ಇಂಗ್ತಿರೋದ್ನ ತಾನು ತಿಳುಕೊಳ್ಳೋಕೆ ತನಗೆ ಒಂದು ಕನ್ನಡೀಗ್ಕೂಡ ಗತಿ ಇಲ್ದೆ ತನ್ನ ಅಪ್ಪ ಅಮ್ಮ ಒಪ್ಪಿದ ಕೆಲಸಕ್ಕ್ ಬಾರ್ದ ಯಾರೋ ಒಬ್ಬ ಗಂಡ್ಸು ತನ್ನ ಕುತ್ಗೇಗೆ ಕಟ್ಟಿದ ಕರೀಮಣೀಂಬೋದೇ ತಾನ್ ಸತ್ತ್ಮೇಲೆ ತನ್ನ ಹತ್ತ್ರ ಸ್ವರ್ಗಕ್ಕೆ ಸೇರ್ಸೋ ಏಣೀ ಅಂದ್ಕೊಂಡು ದುಡೀತಾ ನರಳ್ತಿರೋ ಗರ್ತಿಯರ ಲಕ್ಷಗಟ್ಲೆ ಗರ್ತಿಯರ ಏಳ್ಗೇಗೆ ಯಾರಮ್ಮಾ ಯಾವಾಗಮ್ಮಾ ಒಂದು ಕಮ್ಟೀಂತ ಏರ್ಪಾಟಾಗೋದು ? ಅವ್ರೂ ನಿಮ್ಮ್ ನಮ್ಮ ತಂಗಿಯರೇ ಅಲ್ವೇ ?

**ಲೇಡಿ ಶಿವ** (ಸೂಳೆಯ ಉಕ್ತಿಯನ್ನು ಕೇಳುತ್ತಾ ಕೇಳುತ್ತಾ ಬೆಚ್ಚಿಬಿದ್ದು) ಅನ್ಯಾಯ ಬುದ್ಧೀ ಅಮ್ಮಾ ನಿಮ್ದು! ಪ್ರಶಂಸೆ ಮಾತಲ್ಲಾ.. ಸತ್ಯವಾಗ್ ಹೇಳ್ತೀನೇ! ಸಂಸಾರಿಕ ಹೆಂಗಸ್ರಾದ ನಾವು .. ನಮ್ಮ್ ನಮ್ಮಲ್ಲೇ ಇರೋ ಕೊರತೆಗಳಿಗೆಲ್ಲಾ ಕಣ್ಣು ಮುಚ್ಕೊಂಡು ........ನಮ್ಮ್ ಕುತ್ಗೇಲಿರೋ ಚಿನ್ನದ ತಾಳಿಗಳ ಹೆಮ್ಮೇ....... ನಮ್ಮ ತಲೇಗೆ ಹತ್ತಿ ...

**ಸೂಳೆ** ಹೆಮ್ಮೇಂದ್ರೇನಮ್ಮಾ ! ನಿಮ್ಗೆ ? ಹೆಮ್ಮೆ ?! ಹೆಮ್ಮೆಯ ಲವಲವಾಂಶವಾದರೂ ನಿಮ್ಗಿದ್ದಿದ್ರೆ ನೀವು ಈ ನಮ್ಮ್ ಕೊಂಪೇಗೆ ಈ ನಮ್ಮ ಸೂಳೇಗೇರಿಗೆ ಬರ್ತಿದ್ರಾ ? ಸೂಳೇರ ಹೊಟ್ಟೇಲಿ ಹುಟ್ಟಿದ ನನ್ನ ಪುಟ್ಟ್ನಾನ "Little Lady" ಅಂತಿದ್ರಾ ?? , ನಾನ್ ಹೇಳೋದು ಅದಲ್ಲಾವಮ್ಮಾ ನನ್ನ ಕಸುಬಿಗೆ ತುತ್ತಾಗ ನನ್ನ ತಂಗಿಯರಿಗಿರೋ ಆಹಾರ, ನಿದ್ರಾ ಇತ್ಯಾದಿ ಕೊರತೆಗಳನ್ನು ನಾನಾದ ನಾನೂ, ನೀವಾದ ನೀವೂ, ನಿಮ್ಮ ಅದ್ಭುತ ಕಮೀಟೀನೂ ಪರಿಹರಿಸಬೇಕೂ, ಅಂಬೋ ದಲ್ವೇ ನಿಮ್ಮ ನಿಮಿತ್ತ ?

**ಲೇಡಿ ಶಿವ** ಹೌದಮ್ಮಾ ಹೌದು !

**ಸೂಳೆ** ನೋಡೀ, ಕಷ್ಟಪಡೋ ಹಲಕೆಲವು ಸೂಳೆಗಳಿಗೆ ನೀವುಗ್ಳು ತಾನೇ ಆಗ್ಲಿ, ಹಲಕೆಲವು ಬಡ ಗರ್ತಿಯರ್ಗೆ ನನ್ನಂಥಾವ್ರು ತಾನೇ ಆಗ್ಲಿ ಸಹಾಯ ಕೇವಲ ಧನಸಹಾಯ ಎಷ್ಟೂಂತ ಮಾಡಿದ್ರೆ ತಾನೆ ಏನೂ ? ಈಗ್ಲೂನೂ, ಇನ್ನ್ಮುಂದಕ್ಕೂನೂ ಇದೊಂದು "ವೇಷಾ"ಂತ ನೀವೇ ಹೇಳಿದ್ರೀ ಅಲ್ವೇ ? . ಗರ್ತಿ "ವೇಷ್ವಾ"ಗ್ಲಿ ಸೂಳೆ ವೇಷ್ವಾಗ್ಲೀ ಹೆಂಗ್ಸೂ ಅಂತ ಹುಟ್ಟಿದ್ ಮೇಲೆ ಈ ಎರಡು ವೇಷಗಳಲ್ಲಿ ಒಂದನ್ ವಹಿಸ್ಕೊಂಡು ಆಹಾರ, ನಿದ್ರೆ ಅಲ್ದೆ ಇತರ ತಿರ್ಯಕ್ ಪಶುಕರ್ಮಗಳ ಗಲಾಟೇಲಿ ನಾಯಿ ನರಿಗ್ಳ ಲೆಖ್ಖಾಚಾರಕ್ಕೆ ಸಿಕ್ಕೊಳ್ದ ಪುಣ್ಯ ಪ್ರಭಾವದಿಂದ ಹುಟ್ಟಿದ ಮನುಷ್ಯ ಕಾಲ, ದೇಶ, ವರ್ತಮಾನ ಇಲ್ದೆ .. ..ಮೈಥುನಕ್ಕೇ ಸರ್ವ ಕಾಲವೂ ಸಾಧಿಸ್ತಾ ... ಹೆಂಗಸರ್ನ ತನ್ನ ಸುಖಕ್ಕೆ ಆಡಿಸ್ತಾ ಪಾಪ ಪುಣ್ಯಕ್ಕೂ ಹೆದರ್ದೆ ನಿಮ್ಮನ್ನು "ನೀವೂಂ"ತ್ಲೂನೂನೇ ನನ್ನನ್ನು "ನಾನೂ"ಂತ್ಲೂನೂವೇ ವಿಂಗಡಿಸಿ . ....ಇಬ್ಬರ್ನೂ ಹೆಂಗ್ಸಾಗಿ ಹುಟ್ಟಿದ ಜನ್ಮಾನೆಲ್ಲಾ ತನ್ನ ಆಹಾರ ನಿದ್ರೆ ಮೈಥುನಕ್ಕೆ ಗರ್ತೀನೂ ಸೂಳೇನೂ ಗೊಂಬೆಗ್ಳ ಹಾಗೆ ಆಡಿಸ್ತಿರೋ ಗಂಡು

ಮೃಗದಿಂದ್ಲೇ—ನಿಮ್ಮ ನಮ್ಮ ಸ್ಥಿತೀಗೆ ಮೂಲಕಾರಣವಾದ ಈ ತಿಳಿದೂ ತಿಳಿಯಲೊಲ್ಲದ ಗಂಡು ಮೃಗ—ನೀವು ಶ್ಲೋಕ ದಲ್ಲಿ ಹೇಳೋಹಾಗೇ ಈ ಗಂಡೂಂಬೋ ಮೃಗ ನೀವ್ ಹೇಳ್ದಾಂಗೆ ಜಾಗರಿಸ್ಕೊಳ್ಳೋವರವಿಗೆ ಏಳ್ಗೆ ಎಲ್ಲೀದಮ್ಮಾ ಹಂಗಸರಿಗೆ ? ಈ ಗಂಡು ಮೃಗ ಆಡಿಸ್ತಿರೋ "ಗರ್ತೀ ಕಸಬ್ಗೆ" ಪ್ರತಿನಿಧಿಯಾದ ಲಕ್ಷಾಂತ್ರ ನಿಮ್ಮಂಗಳಿಗಾಗ್ಲೀ "ಸೂಳೆ ಕಸ್ಬಿಗೆ" ಪ್ರತಿನಿಧಿಯಾದ ನನ್ನಂಥಾ ಸಾವಿರಾರು ಸೂಳೆಗಳ್ಗಾಗ್ಲೀ ??? (ನಸುನಗುತ್ತಾ ಎದ್ದು ಇದುವರೆಗೆ ಸೂಳೆಯ ಮಾತಿಗ ಒಳವಿದ್ದ ಲೇಡಿ ಶಿವದಾಸಅಯ್ಯರನ್ನು ಸಮಾಧಾನಿಸಿ ಹೆಗಲನ್ನು ಸವರುತ್ತಾ "ಕ್ಷಮ್ಸೀಮ್ಮಾ" ! ಎಂದು ಹೇಳಿ ಮೊದಲಿನಂತೆ ಕುರ್ಚಿಯಲ್ಲಿ ಕುಳಿತು) ಒಟ್ನಲ್ಲೀಮ್ಮಾ, ಹಂಗ್ಸಿನ ಯೋಗ್ತ್ಯೆ ಗಂಡ್ಸು ತಿಳೀದೇನೂ ಗಂಡ್ಸಿನ ಅಯೋಗ್ಯತೀಗ ಹಂಗ್ಸು ಕಣ್ ಮುಚ್ಕೊಂಡೂನೂ ಇರೋದ್ರಿಂದ್ಲೇ ಈ ಅನಿಷ್ಟಗಳೆಲ್ಲಾ ಈಗಿರೋದು, ಸಮಾಜಕ್ಕೆ !

**ಲೇಡಿ ಶಿವ** (ಚಮಕಿತಳಾಗಿ) ಹಾಗಾದ್ರ ಗಂಡಸ್ರಲ್ಲಾ ಕಿರಾತ್ರೇ ?

**ಸೂಳೆ** ಹೌದೂಮ್ಮಾ ! ಎಲ್ಲಾ ಕಿರಾತ್ರೇ ! ನಿಮ್ಮ ಯಜಮಾನ್ರಂಥ ಒಬ್ಬಬ್ರನ್ ಬಿಟ್ಗೆ ಒಟ್ಟು, ಮಿಕ್ಕ ಹೆಂಗಸ್ರಿಗೆಲ್ಲಾ ಕಿರಾತ್ರೇ ಗಂಡಸ್ರು ಒಬ್ಬಬ್ಬ ಗಂಡಸರ್ನ ಬಿಟ್ಟು, ಮಿಕ್ಕ ಗಂಡಸ್ರಿಗೆಲ್ಲಾ ಹಂಗ್ಸು ಕೇವಲ ಭೋಗ ಪದಾರ್ಥ ಇದು ನಿಮಗ್ ಗೊತ್ತಿಲ್ಲ ತನ್ನ ಭೋಗಕ್ಕ ಒದಗಿದೋಳು . ಸೂಳೆಯಾಗ್ಲೀ ಇಲ್ಲಾ ತಾನು ತಾಳೀಕಟ್ಟಿ ಬೆಂಕೀ ಯೆದುರ್ಗ "ಧರ್ಮೇಚ ಕಾಮೇಚ ಅರ್ಥೇಚ ನ ಅತಿಚರಾಮಿ", ಅಂತ ತಾನು ಮಾತ್‌ಕೊಟ್ಟ ಹೆಂಡ್ತಿಯಾಗ್ಲೀ ಭೋಗ ಪದಾರ್ಥದ ಆಹಾರಕ್ಕೆ, ನಿದ್ರೇಗೆ ಆಗಾಗ್ಗೆ ದುಡ್ಡು ಕೊಡುತ್ತಾ ಸಂಸಾರಿಯರನ್ನೂ ಸೂಳೆಯರನ್ನೂ ಈ ಡಬ್ಬಲ್ Z ಅನಾನಾನ ಜರಗಿಸ್ತಾ .ಮಿಾಸೆ ಹೊಸೀತಿರೋ ಗಂಡ್ಸು ಕಿರಾತನಲ್ವೆ

ಇನ್ನೇನು ? ಇವನ ಭೋಗಕ್ಕೆ ತಾಳೀಕ್ಕಟ್ಟಿಸ್ಕೊಂಡು ಬೀಳೋ ತುತ್ತೂ ನೀವು ! ತಾಳೀಕ್ಕಟ್ಕೊಸ್ಕೊಳ್ಳದೇನ ಬೀಳೋ ತುತ್ತೂ ನಾವು ! ಈ ಗಂಡಿನ್ನ ನಮ್ಮ ಹಾಗ್ಯೇ ತೃಪ್ತಿಪಡಿಸದೆ ಇರೋ ಇವನ ಪತ್ನಿಗಳು ಎಷ್ಟು ದುಡ್ತಾನೆ ಎರ್ಚೆ, ಎಷ್ಟು ಕಮಿಟಿ ಗಳ್ನ ಏರ್ಪಡಿಸಿದ್ರೂನೂವೇ ಏಳ್ಗೇ ಎಲ್ಲೀದವ್ಮಾ ನಮಗೇ ನಿಮ್ಮಿನ್ನಾ ?

**ಲೇಡಿ ಶಿವ** ಇದೇನಮ್ಮಾ ! ಹೀಗ್ಹೇಳ್ತೀರಾ ! ಯೌವನದಲ್ಲಿ ತಾಳೀ ಕಟ್ಟೀ, ತನ್ನ ಕೈ ಹಿಡ್ದ ಹೆಂಡ್ತೀ ಜೂತೇಲಿ ತನ್ನ ಯೌವನ . ವಾರ್ಧಿಕ್ಯ ತನ್ನಾಯಸ್ನೆಲ್ಲಾನೂ ಕಳೀತಾಲೂ ತನ್ನ ತನು-ಮನ-ಧನಗಳನ್ನೂ ತನ್ನ ಕೈಹಿಡ್ದ ಸಹಧರ್ಮಿಣಿ ಕೈಲಿ

**ಸೂಳೆ :** (Interrupting and indignantly) ತನ್ನ ಸಹಧರ್ಮಿಣಿ! ಹಯ್ಯೋ, ಬಿಡೀವ್ಮಾ ! ನಿವ್ಮ್ ಮನಸ್ಸು ಶುಭ್ರವಾದಾಕ್ಷಣವೇ ತ್ರಿಲೋಕಾನೂ ಶುಭ್ರಾಂಜೋ ಆವೇಶದಲ್ಲಿಧೀರಾ . ನೀವು ? ಸಮಾಜನೆಲ್ಲಾ ನಿವ್ಹಾಗೆ ಇದ್ಬಿಟ್ರೆ ಜೈಲುಗಳ್ಯಾಕೆ ? ಬ್ಯಾಂಕುಗಳ್ಯಾಕೆ ? ಬೀಗಗಳ್ಯಾಕೆ ? ಮನೆ ಕಿಟ್ಗಗಳ್ಗೆ ಕಂಬಿ ಗಳ್ಯಾಕೆ, ಸಲಾಕಿಗಳ್ಯಾಕೆ ? ಪೋಲಿಸ್ನ್ಯಾಕೆ ? .ಜಡ್ಜಿಗಳ್ಯಾಕೆ ? ಲಾಯರಿಗಳ್ಯಾಕೆ ಸಮಾಜದಲ್ಲಿ ಅನ್ಯೋನ್ಯ ಜೀವ್ನಕ್ಕೆ ಬೇಕಾದ ಗದ್ದ, ಹೂಲ, ಕೃಷಿ ಫಲಗಳ್ನ ಪರಸ್ಪರ ಕೊಟ್ಟು ತಕ್ಕೊಂಡು ಸು ಖ ವಾ ಗಿ ಜೀವಿಸಬಹುದಾದ ನಮ್ಮ ಸಮಾಜಕ್ಕೆ. ಪವ್ನನ್ನು - ರೂಪಾಯಿ - ಆಣೆ - ಕಾಸು - ಬಿಡ್ಗಾಸು ಅಂಬೋ ನಾಣ್ಯಗಳ್ಯಾಕಮ್ಮಾ ನಮ್ಮ ದೇಶ್ದಲ್ಲಿ ?.

**ಲೇಡಿ ಶಿವ** ದೇವ್ರೇ ಗತೀವ್ಮಾ ? ಚಪ್ಪು ಹಿಡಿಸ್ತಿಧೀರಾ ನನ್ನ !? ನೀವು ಕೈಗಾರ್ಕೆ ಕೃಷಿ ವ್ಯವಸಾಯ ದುಡ್ಡೂಂತ ಅಂಬೋ ದ್ನೆಲ್ಲಾ ನಮ್ಮ ಯಜಮಾನ್ರು Finance Commissionಗೆ ಅಂತ ಡೆಲ್ಲೀಗ್ ಹೋಗಿ ತಿರಗ್ಬಂದು .ತಿಳುವಳ್ಕೆ ಇಲ್ಲದ್

ನನ್ನ ಕಿವೀಗೆ ತುಂಬಿದ speechಉ ಜ್ಞಾಪ್ಕಕ್ಕೆ ಬರುತ್ತೆ !! ನೀವೆಲ್ಲಿ ಕಲಿತಿರವ್ಮಾ ಇದ್ನೆಲ್ಲಾ ?!

ಸೂಳೆ (ನಗುತ್ತಾ) ನಮ್ಮ್ ಸುಬ್ಬೂ ಕೂಡ ಒದಿದಾವ್ಮಾ ಅದೇ Speechoo B A ಆದೋನು ಆವನೂ ನನ್ಗೆ ಅರ್ಥ ವಾಗ್ದಿದ್ರೂನೂವೇ ಅವನು ಓದಿದ ಇಂಗ್ಲಿಷ್ ಪದಗಳ ಭರಾಟೀ ಗೇನೇ ನಾನು ಬೆಚ್ಚಿದ್ದೇವ್ಮಾ! ..ಆದ್ರೆ "Financeoo"ಂಬೋ ಪದಕ್ಕೆ "ದುಡ್ಡು" ಅಂಬೋ ತರ್ಜುಮೆ ಮಾಡೋ ಇಂಗ್ಲೀ ಷಾದ್ರೂ ಸುಬ್ಬೂಗ್ ಗೊತ್ತಿರೋ ಹೊತ್ಗೇನೇ ನನಗೂ ಹೇಳ್ಕೊಟ್ನವ್ಮಾ! ಒಟ್ನಲ್ಲಿ ಇಂಡಿಯಾ ದೇಶ್ದ ಕೋಟ್ಯಾಂತ್ರ ರುಪಾಯ್ನ ಜಮಾಖರ್ಚು . ನಿಮ್ಮ್ ಯಜಮಾನ್ರು ದೆಹಲೀಲಿ ಮಾದಿಸ್ತಿದ್ದಾಕ್ಷಣ್ವೇ ನಮ್ಮ್ ದೇಶ್ದಲ್ಲಿ ನಿಮ್ಮನ್ನ ಮುಂದೆ ತಳ್ಳಿರೋ committee ಹಂಗಸ್ರು, ನಾವು ಸೂಳೇರೂ . ನಮ್ಮ ಏಳ್ಗೀಗೆ ಬೇಕಾದ ಲಕ್ಷಾಂತರ ರೂಪಾಯ್ನ ಒದಗ್ಸೋಕೆ ತಯಾರಾಗಿದ್ದೀರವ್ಮಾ?

ಲೇಡಿ ಶಿವ ಇದೂ ದುಡ್ಡಿನ್ಮಾತಲ್ಲಾವ್ಮಾ !

ಸೂಳೆ ನನಗ್ಗೊತ್ತೂವ್ಮಾ! ದುಡ್ಡಿನ್ ಮಾತಲ್ಲಾ! ನಿಮ್ ಮನಸ್ನ ಕಳವಳದ್ಮಾತು! ನಿಮ್ಮ ಸಂಘ ಸೂಳೇರೇಳ್ಗೀಗೆ ಎದ್ದ್ ನಿಂತದ್ದಾಯ್ತು! ಅದರ ನಿಮಿತ್ತಾನ ಸಾಧಿಸೋಕೇಂತ (ಮಾತನ್ನು ನಿಲ್ಲಿಸಲು ಪ್ರಯತ್ನಿಸುವ ಲೇಡಿ ಶಿವದಾಸಯ್ಯರ್‌ರ ಮಾತಿಗೆ ಅಡ್ಡವಾಗಿ) ನಿಮ್ಮನ್ನ ಮುಂದಿಟ್ಟಿರೋದು ಈ ಕಮ್ಟಿ! ಹೌದೋ ಅಲ್ವೋ ? ನಮ್ಮೇಳ್ಗೀಗೇನ್ ಮಾಡ್ತೀರವ್ಮಾ ನೀವು ? ಮನ್ಲಾ ನಾವೆಲ್ರೂನೂವೆ ನಮ್ಮ್ ಕಸ್ಬಿನೋರು ನಾವೆಲ್ರೂನೂವೇ ನಿಮ್ ದೊಡ್ಡ ಬಂಗ್ಲೆ ಕಾಂಪೋಡಿನಲ್ಲಿ ಹಿಂಡು ಹಿಂಡಾಗಿ ಜಮಾಯಿಸ್ಕೊಂಡು, ನಿಮ್ಮ ದರ್ಶನವಾದ್ಮೇಲೆ .. ಈ ನಮ್ ಕಸ್ಬು ಬಿಟ್ಬಿಟ್ರೊ ಅಂತಿಟ್ಕೊಳ್ಳಿ ..ಮನ್ಲ !.. ...

ನಾವ್ಬಿಟ್ಟ ಮನೇಗ್‌ಬದ್ಲಾಗಿ ಇನ್ನೊಂದು ಮನೇಕಟ್ಟಿ ನಾವೀಗ ತಿನ್ತಾ ಇರೋ ಅನ್ನ ಬಟ್ಟೇನ ನೀವು ಕೊಟ್ಟು ಲಕ್ಷಾಂತರ ಗಟ್ಲೆಯಾಗಿ ಈಗ ನರಳ್ತಿರೋ ನಮ್ಮನ್ನೆಲ್ಲಾ ಸುಖವಾಗಿಡೋಕೆ

ಈ ಒಂದು planoo ಅಂತಾರಲ್ಲಾ planoo .. ಅದ್ನೇನಾದ್ರೂ ನಿಮ್ಮ committee ತಯಾರು ಮಾಡಿಧಾರ್‍ಯೇ ?

**ಲೇಡಿ ಶಿವ** ಹೌದನ್ಮಾ ! ನಿಮುಗ್ ಕೆಲ್ಸಾ ಕೊಡ್ತೀವೆ !

**ಸೂಳೆ** (ನಸುನಗುತ್ತಾ) ನಿಮುಗ್ ಗೊತ್ತಿಲ್ಲಾಮ್ಮಾ ! ಕೆಲ್ಸ ಕೊಟ್ಟಿರೋದೂ ನಿಮುಗೆ ? ನಿಮ್ಮ ಕಮ್ಟೀ !....ಕಾಮಧೇನೂ ಹಾಗೆ ಆಜನ್ಮಾಂತರ "ಸತ್ತ್ವ" ಅಂತಾರಲ್ಲಾ ಆ ದಾರೀಲೇನೇ ಇದು ನರೆಗೂ ಜೀವಿಸಿದ ನಿಮ್ಮನ್ನ ತಾವು ಹಿಂದೆ ಅವಿತ್ಕೊಂಡು ಮುಂದೆ ಕಳಿಸಿದ ಆ ಕಮಿಟಿ ಹೆಂಗಸ್ರು ಕೆಲಸ ಕೊಡೋದೂ ನಮುಗಲ್ಲ

ನಾವೂ too much ಘಾಟೀ ! ನಾನೂ ಸ್ವಲ್ಪ ಇಂಗ್ಲೀಷ್ನ, ಇಲ್ಲಿ ಬರೋ ಸ್ನೇಹಿತರಿಂದ ಕಲ್ತಿಧೇನೆ ! ಅವರು ಕೆಲಸ ಕೊಟ್ಟಿರೋದು ತಮುಗೆ ! ಚಿರತೆ ಅಂತಾರಲ್ಲಾ ಆ ಬಾಬತ್ತು ಅವರುಗಳೂ ! ಕಾಮಧೇನು ಅಂದೆನಲ್ಲಾ ಆ ಬಾಬ್ತು ತಾವು ! ಚಿರತೆಯು ಕುತ್ತಿಗೇ ಬೆನ್ನನ್ನ ಮುರಿದು ಮೂಲೆಗೆ ಎಸಿಯೋ "ಹಬ್ಬುಲೀ"ಂತಾರಲ್ಲಾ ಪುಟ್ಟಾ ಅಂದ್ಹಾಗೆ ಆ ಬಾಬತ್ತು ನಾವು!—ಸೂಳೆಗಳು! ಈ ಹಬ್ಬುಲಿಗಳು ನಾವು! ಮನುಷ್ಯಾಮ್ಮಾ! ನಿಮುಗೆ ತಿಳಿಯುವ ಸಂಸ್ಕೃತ ಇಲ್ಲಾ ! ಆದರೂ ಹೇಳ್ತೀನೆ .

"ಪುನ್ನಾಮ್ನೋ ನರಕಾದಸ್ಮಾತ್ ತ್ರಾಯತೇ ಇತಿ ಪುತ್ರಃ !" ಹೀಗೇ ತಾನು ಸತ್ಮೇಲೆ ತನಗೂ ತನ್ನ ಪಿತೃಗಳಿಗೂ ಸಲ್ಲಿಸಬೇಕಾದ ಪಿಂಡಾನ ಕೊಡೋ ಪುತ್ರ ಬೇಕೂ ಅಂಬೋ ಧರ್ಮಾನ ಮುಂದಿಟ್ಕೊಂಡೂ ತನ್ನ ಪುತ್ರನ್ನ ಹೆರೋಕೆ ಹತ್ತು ತಿಂಗಳು ಹೊತ್ತು ಜನಾನಾ ಹಾಸ್ಪಿಟಲ್ ಸಹಾಯವಿಲ್ಲದೆ ಹೆರೋ ನಿತಂಬಗಳು.... "wet nurse" ಇಲ್ಲದೆ ಆ ಮಗೂಗೆ ಕುಡಿಸೋ ಮೊಲೆಗಳೂ ..

ಅಲ್ದೆ ತನ್ನ ಕುಟುಂಬದಿಂದ "Hysteria" "Epilepsy"

ಹುಚ್ಚು "Diabetesಊ" ಇತ್ಯಾದಿ ಯಾವ ರೋಗಗಳೂ ಕುಲಗೋತ್ರ, ಜಾತಿ ಸಮಾಜದಲ್ಲಿ ಇಲ್ಲದ ಹೆಂಗಸ್ನ ಚುನಾಯಿಸಿದ "ಮಗು ಬೇಕೂ"ಂಬೊ ಗಂಡ್ಸು! ಇದು ಒಂದು ತರಹ ಗಂಡ್ಸು ತನ್ಮಪ್ಪ ಸಂಪಾದಿಸಿದ ದುಡ್ಡು, ತನ್ನ ಅಪ್ಪ ಅಮ್ಮ ಕೊಟ್ಟ, ನೆಟ್ಟ ಮಾಗು, ಕೆಂಪು ಚಮ್ಮ, ಈ ಆಸ್ತಿಗಳ್ನ ವ್ಯವಸ್ಥೇಗೆ ತಂದು, ಸಮಾಜದಲ್ಲಿ ಇಲ್ಲದ ಹಾವಳಿ ಮಾಡಿ, ಹಲವಾರು ಕುಟುಂಬಗಳಿಗೆ ಹಾಸಿಬೀರಿ ಕೊನೇಗೆ, ಹಾಸ್ಪಿಟಲ್‌ನಲ್ಲಿ ಸಾಯೋ ಗಂಡ್ಸು ಇನ್ನೊಂದು ತರಹಾ ಗಂಡ್ಸು! ಮೊದಲನೇ ಬಾಬ್ತು ಗಂಡಸ್ರುಗಳ ಗೋಷ್ಠೀಗೆ ಸೇರಿದವರು ತಾವು: ಈ ಎರಡ್ನೇ ಗೋಷ್ಠೀಗೆ ಸೇರಿದ ಕ್ರಿಮಿಗಳಿಂದ ಬದುಕಿಯೂ ಘಟ್ಟಿ ಪುಷ್ಟಿಯಾಗಿರೋವ್ರು ನಾವು! ಸಂಸಾರಗಳು ತಕ್ಕೊಳ್ಳೀಮ್ಮಾ? ನಿಮ್ಮ ನಿಮ್ಮಂಥಾ ಎರಡು ಮೂರು ಸಂಸಾರಗಳ್ನ! .... ,ಬಿಟ್ಟು ಮಿಕ್ಕ ಸಂಸಾರಗಳನ್ನು ತಕ್ಕೊಳ್ಳಿ! ಮನ್ಸ! ಮನುಷ್ಯ! ದೊಡ್ಡ ಮನುಷ್ಯ, ದುಡ್ಡು, ದಂಢ್ಯಾಗಿ ಧನಾನ ಸಂಪಾದಿಸೂೀ ಮನುಷ್ಯ ಆದ್ರೂನೂವೇ "ಆಹಾರ", "ನಿದ್ರಾ", "ಭಯ", "ಮೈಥುನ" ಈ ಚರ್ಮಾತ್ಮ ತಿರ್ಯಕ್ ಚತುಷ್ಟಯದಿಂದ ಕಟ್ಟಿರೋ ಮನೆಯಾಕೆ, ಮರುದಿನ, ಮೂರು ರಾತ್ರೆ ಮೂರುಪ್ಪು ಮುಂದಾಗಿ ಹಾಕಿ ಬಡಿಸಲಿ! .ಹೋಟಲಿಂದ ಅನ್ನ ತರಿಸ್ಕೊಳ್ತಾನೆ office ಎಲ್ಲಾ ಅವನು business ಮಾಡೋ ಷಾಪಿನಲ್ಲೇ ಇವನಿಗೇಂತ ಹೆತ್ತ ಹಸು ಮಗು ಮಧ್ಯರಾತ್ರೀಲಿ ಶೈಶವಾವಸ್ಥೇಲಿ ಕಿರ್ಲಿ ಇವನ "ನಿದ್ರಾ ಸುಖಾ"ನ ಭಂಗಿಸ್ತೋ ಬೇರ ಕಡೆ ಮಲಕ್ಕೊಳ್ಳೋಕೆ ಏರ್ಪಾಡು ಮಾಡುಕೋತಾನೆ .ಇನ್ನು ಇವನ ಸಂಸಾರದಲ್ಲಿ, ಸಿಡುಬೂ ಗಿಡುಬೂ, ವಾಂತಿ ಬೇಧಿ, ಆಮಶಂಕೆ, ರಕ್ತಬೇಧಿ ಇವನ ಸಹಧರ್ಮಿಣೀಗೆ ಆಗ್ಲಿ, ಸುಪುತ್ರ, ಶ್ರೀಮಂತ ಪುತ್ರ ಶ್ರೀಮಂತ ಸುಪುತ್ರಿಯರಿಗೇ ಆಗಲಿ ತಗಲ್ತೋ, ತನ್ನ ಪ್ರಾಣ, ತನ್ನ ಭಯಾನಕದ ಬೆದರ್ಕೇಲಿ ಕುಟುಂಬಾನ್ನೇ ಆಸ್ಪತ್ರೀಗೆ ಜರಗಿಸ್ತೋ, ಇಲ್ಲಾ,

ತನಗೆ " Bussiness " " ಗಿಸಿನೆಸ್ಸೂ " ' Camp duty "
"Calcutta Wire" ಊಂತ ಹೀಗೋ ಹಾಗೋ ತಪ್ಪಿಸ್ಕೋ
ತಾನೆ ಮರಣದ ಅಪಾಯಾನ ! ಇನ್ನು ಮೂರೂ ಆಯ್ತೇ !
"ಆಹಾರ" "ನಿದ್ರಾ" "ಭಯ" ! ಇನ್ನು ನಾಲ್ಕನೇ
ತಿರ್ಯಕ್ ಚಪಲಾನೂ ಹೀಗೇನೇಪೇಯಿ ನೆಟ್ಟ ಮೂಗು,
ನೀಳ ಕೂದಲು, ತಲೆ, ಮೊಲೆ, ತೊಡೆ, ನಿತಂಬಗಳ್ನ ನೋಡಿ ತನ್ನ
ತಿರ್ಯಕ್ ಸುಖಕ್ಕೇಂತ ಹೆಂಗಸನ್ನ ಮದಿವೆ ಮಾಡಿಕೊಳ್ಳೋ
ಗಂಡ್ಸು ಒಂದು ರಖಮ್ಮು. ನಾನು ಮೇಲೆ ಮೇಲೆ ಹೇಳಿದ
"ಮಕ್ಕಳು ಬೇಕೂ"ಂತ ಮದುವೆ ಮಾಡಿಕೊಳ್ಳೋದು ತಮ್ಮ
ಯಜಮಾನ್ರ ಹಾಗೆ ಇವನೊಂದು ರಖಮ್ಮು ! ಈ ರಖಮ್ಮಿಗೆ
ತನಗೆ "ಮಕ್ಕಳು ಬೇಕೂ"ಂತ ಮಕ್ಕಳನ್ನು ಹೊತ್ತೂ ಹೆತ್ತೂ
ತನ್ನ ಪ್ರಾಣಗಳ್ನ ಪ್ರತಿಯೊಂದು ಹೆರಿಗೇಲೂ ಒತ್ತೆಯಿಟ್ಟು
ಕುಗ್ಗೀ ಕುಗ್ಗೀ ಕೊನೇಗೆ ಹಂಚಿಕಡ್ಡಿ ಹಾಗೆ ನಿಂತಿರೋ ಹೆಂಗ್ಸು
'ಸಮಾಜಕ್ಕೆ ಐದಾರು ಮಕ್ಕಳ್ನ ಹುಟ್ಟಿಸಿ ಶಿಕ್ಷಿಸಿ ಸಮಾಜಕ್ಕೆ
ಸಲ್ಲಿಸಿದೇನೆ ! ಸೇವೆ ಮಾಡಿದೇನೆ' ಂತ ಹಿಗ್ಗೋ ಗಂಡನಿಗೆ
ಈ ಹಂಚೀಕಡ್ಡೀ ಹೆಂಡತಿ, ದೇವತೆ—ದೇವತೆ ಹಾಗೆ ಕಂಡು
ಬರ್‍ತಾಳೆ ಅವನ ಕಣ್ಣಿಗೆ ! ಆ ಮೊದಲನೇ ರಖಂ ಗಂಡ್ಸೂ
ತನ್ನ ಮಾಂಸ, ದುಡ್ಡಿನ ಕೊಬ್ಬಿನ್ನ ಕರಗಿಸಿಕೊಳ್ಳೋಕೇಂತ
ಕಂಪು ಚರ್ಮ ತಲೆ ಮೊಲೆ ನೆಟ್ಟಗೂ, ಮೇಲೆ ಹೇಳಿದ
ಬಾಬತ್ನೆಲ್ಲಾ ಮುಂದಿಟ್ಕೊಂಡು ತನ್ನ ಭೋಗ ಮೈಥುನಕ್ಕೇಂತ
ಮದುವೆಯಾಗೋನಿಗೆ ಹುಟ್ಟೋ ಮಕ್ಕಳೆಲ್ಲಾ ಉಪಭೋಗ
ಕ್ರಿಮಿಗಳು [By - Products] ಇವನು ಯಾವ ಯಾವ
ಅಂಗಾಂಗಗಳಿಗೆ ತನ್ನ ಹೆಂಡತೀಗೆ ಸೋತು ತಾಳಿ ಕಟ್ಟಿದ್ನೋ
ಆಯಾ ಅಂಗಾಂಗಗಳು ಕುಗ್ಗಿ ಜೋಲು ಬೀಳತ್ಲೂ . . ಅದೇ
ಅಂಗಾಂಗಗಳು ಘಟ್ಟಿಮುಟ್ಟಯಾಗಿರೋ ಇತರ ಹೆಂಗಸ್ರನ್ನ .
ಆಂದ್ರೇನೂ ನಮ್ಮಂಥಾವರ್ನ್ನ ಅರಿಸಿಕೊಂಡು ...ಒಟ್ನಲ್ಲಿ ನಮ್ಮ
Lineಗೆ ಬಂದು, ತನ್ನ ಸರ್ವಸ್ವಾನ್ನೂ—ಹೆಂಡತೀ, ಮಾನ

ಮರ್ಯಾದೇ ಎಲ್ಲಾನ್ನೂ ಮಾರ್‍ತು—ನಮ್ಮ ಕಾಲಿಗೊಪ್ಪಿಸ್ತಾನೆ ಸಮಾಜದ ಗಂಡಸರು ಬುದ್ಧಿವಂತರೇ ಆಗ್ಲೀ ಎಷ್ಟು ಎಷ್ಟು ಅಂತಸ್ತಿನವರೇ ಇರಲಿ ಎಷ್ಟು ಐಶ್ವರ್ಯಾನೇ ಇರ್‍ಲಿ ಇಲ್ಲಿಗೆ ಅವರವರಾಗಿಯೇ ಬಂದು ಅವರ ಮನೇ ಆಕೆಗಳಿಗೆ ಒಪ್ಪಿಸಲೇ ಬೇಕಾದ ದುಡ್ಡ್ನ ಇಲ್ಲಿ ಸುರಿದು ಅವರು ಕೊಡಲೇಬಾರದ ರಣ ರೋಗಗಳ್ನ ಇಲ್ಲಿ ಸಂಪಾದಿಸಿಕೊಂಡು ಹೋಗಿ, ಅವರ ಸಂಸಾರದಲ್ಲೀ ಕುಲ, ಗೋತ್ರ, ಪ್ರವರ, ಮಕ್ಕಳು, ಮೊಮ್ಮಕ್ಕಳು ಇನ್ನವರ ಮುಂದೆ ಮೂರು ತಲಮಾರುಗ್ಳು ಕಣ್ಣಿಲ್ದೆ, ಮೂಗಿಲ್ದೆ, ಕೈಕಾಲಿಲ್ದೆ ನರಳೋ ಶಿಶು ಸಹಸ್ರಗಳ ಸಿಧೀನ ಮಾತ್ರ ಸಲ್ಲಿಸಿ ಸಮಾಜಾನೆಲ್ಲಾ ಒಂದೇ Syphilis Gonorrhea ಕೂಪದಲ್ಲಿ ದಬ್ಬಿದರೂನೂವ—ಇಂಥಾವರ ಹೆಂಡತಿಯರು— ಗರ್ತಿಯರು ಮಾತ್ರ ನಮ್ಮನ್ನು "ಸೂಳೆ ಮುಂಡೆ" "ಹಾದರಗಿತ್ತಿ" "ಗುಡಿಶೆಟ್ಟಿ"—ಕ್ಷಮಿಸ್ಬೇಕಮ್ಮಾ ಇದಲ್ಲಾ ನಿಮಗೆ ಗೊತ್ತಿಲ್ಲದ ವಚನಗಳು—ಆದ್ರೂ ಕಿವೀಗ್ ಹಾಕ್ಕೊಳ್ಳೋದು ಮೇಲು— ಹೀಗೇ ನಮ್ಮನ್ನು ಕೂಗೋ ಗರ್ತೀಗಳ ಮೇಲೇ ನಮಗಿರೋ ಸೇಡು ತೀರಿಸ್ಕೊಳ್ಳೋ ಹಬ್ಬಲಿಗಳ್ನಾ—ನಮ್ಮನ್ನಾ—ಈ ಗಂಡು ಕ್ರಿಮಿಗಳ ಬೆದರಿಕೇಗೆ ಮುದುರಿಕೊಂಡು ಇರೋ ಹೇಡಿ ಕಿರುಬ ಗಳಾಗಿರೋ ಆ ಕ್ರಿಮಿಗಳು—ಗರ್ತಿಯರೂವ್ಮಾ! (Shaking ಲೇಡಿ ಶಿವದಾಸಯ್ಯರ್'s hand) ಯಾವ ಹೇಸಿಗೆ ಕಸಬಿಗೆ ಸೇರಿಸ್ಯಾರಮ್ಮಾ ನಮ್ಮನ್ನಾ ? ತನ್ನ ಹಸಿವಿಗೆ ? ಹುಲ್ಲು ! ತನ್ನ ದಾಹಕ್ಕೆ ? ಕಾವೇರೀ ನೀರು ! ತಾನು ಜೀವಿಸಿರೋದು ? ಸಮಾಜ ಸೇವೆಗೆ ! 'ಸರ್ವಿಸ್ಸು' ಅಂತಾನಲ್ಲಾ ಸುಬ್ಬು . ನಮ್ಮ ಸುಬ್ಬು ಅದಕ್ಕ ಅಂತ ಇರೋ ಹಸುವೋ, ಕರುವೋ, ಹುಲ್ಲೇನೋ ಆದ ತಾವೇ ಆಗಲಿ, ಸೂಳೇರ ಏಳಿಗೇಗೇಂತ ತಮ್ಮ ಏಳಿಗೆ, ತಮ್ಮ ಬೀಳಿಗೇನ ಮರತ ಹೆಂಗಸ್ರು, ತಮ್ಮ ಹಿಂದಿರೋ ಹೆಂಗಸ್ರು ಯಾವ ಹೇಸಿಗೆ ಕಸುಬಿಗೆ ತಾನೇ ನೇಮಿಸೀರಾಮ್ಮಾ?

**ಲೇಡಿ ಶಿವ** : (ಅಡ್ಡಮಾತಾಗಿ ಗಂಭೀರವಾಗಿ) ದೇವ್ರೆದುರಿಗೆ ನನ್ ತಂಗೀರೂಂತ ನಾನ್ಕಾಣೋ ನಿಮ್ಮನ್ನೆಲ್ಲಾ ನನಗೆ ಹೇಸಿಗೆ ಆದ ಕೆಲ್ಸಕ್ಕೆ .ನೇಮ್ಸೀನ ನಾನು !?

**ಸೂಳೆ** ಅವ್ವಾ, ಸರಿ! ಈಗ ನಮ್ಮ ಕಸುಬು ಬಿಟ್ಟ ನಾವ್ರು, ದಿನ್ದಿನಕ್ಕೆ ನೀವು ನೇಮಿಸೋ ಮುಸಲ ಎಂಟಾಣೆ ಕೆಲಸಕ್ಕೆ ..ಒಪ್ಕೊಂಡ್ರೋ .ಅಲ್ಲಾವಿನ್ನ ನಂಬಿ ಕುಲ್ಲಾವೀನ ಹಾಕಿದರೇ ಅಲ್ಲಾನೂ ಕುಲ್ಲಾವೀನೂ ಅಲ್ಬಿದಾಯೋ ಆಯಿತಂತ ಅಂದ್ಹಾಗೆ ........ಆಗುತ್ತೆ

**ಲೇಡಿ ಶಿವ** ಕ್ಷಮ್ಸಿವ್ವಾ! "Home of industry for fallen women" ಏರ್ಪಡ್ಸಿದ್ದೇವೆ

**ಸೂಳೆ** ನನಗೊತ್ತ್ವವ್ವಾ ಸಂದೀಗುಡಿ ಬಂಗ್ಲೆ ಕೈವಲ್ಯಮ್ಮನ್ ಕಾರ್ಖಾನೆ . ಬೆತ್ತದ್ ಕಾರ್ಖಾನೆ ನಮ್ ಕಸ್ಟ ... ಸಾಧ್ನೋಕೆ ಕೈಲಾಗ್ದೆ ಸುಸ್ತಾದ ಹೆಂಗಸ್ರು ಕೈ ಬೆರಳುಗ್ಳು ಕಿತ್ಹೋಗೋವರ್ಗೂ ಹಣೆದ್ ಬತ್ತದ ಸಾಮಾನ್ಗಳು, ನಿಮ್ಮ Homeನೂ ಆಕೆ ಮನೇನೂ ತುಂಬ ತುಳ್ಕಿ, ತುಳುಕಿದ್ದೆಲ್ಲಾ ಮಾರಿದ ದುಡ್ನಲ್ಲಿ ತನ್ನ ಹೊಟ್ಟೇ ಪಾಡ್ನ ಗಿಟ್ಸಿಸ್ಕೊಂಡು ನಿಮ್ಮ ಕಮಿಟೀ ನೇಮಿಸಿರೋ 'ಗೌರವ ಕಾರ್ಯದರ್ಶಿ" ಅದೇ ಕೈವಲ್ಯಮ್ಮನ ಬಂಧುವರ್ಗಗಳ ಮನೆಗಳ್ನೂ ತುಂಬಿ "ಚಿತ್ರದ್ಕೆಲ್ಸ ಸಾಕು ಹೆಂಗಸ್ರಿಗೆ ತರ್ವಲ್ಲ" ಅಂತ್ಹೇಳಿ ತಮ್ಮ ಕೊಂಪೆಗಳಲ್ಲಿಲ್ಲದ ಮೇಜು ಕುರ್ಚಿ, ಬೆಂಚು ಇವುಗಳ್ನ ತುಂಬಿಸ್ಕೊಳ್ಳೋಕೆ "ಮಠಗೆಲ್ಲಾ ಮೇಲು ಮನೆಗೆಟ್ಟವರಿಗೇ"ಂತಾ ಹೇಳಿ ಉಳಿ, ಕೊಡ್ತಿ ಸಪ್ಲೈಗೆ ನಿಮ್ ಕಮಿಟ್ಗೆ ಅಪ್ಲೈ ಮಾಡ್ತಿರೋ ಆ ಗತಿಗೆಟ್ಟ ಕೈವಲ್ಯಮ್ಮನ ಭೇಟಿಗಿಂತ ನಮ್ಮಾಗಿನ ಸ್ಥಿತೀನೇ ಮೇಲೂವವ್ವಾ! ಇಲ್ಲಿ ನೋಡೀ! ಗರತಿಯರಲ್ಲಿ, ದೊಡ್ಡ ಮನುಷ್ಯನ ಹೆಂಡ್ತೀರೂ, ಕೂಲೀ ಹೆಂಡ್ತಿ, ಕಕ್ಕಸು ಬಾಚೋನ ಹೆಂಡ್ತೀ—ಹೀಗೆ ಗರತೀ

ರಲ್ಲಿ ಅಂತಸ್ತು "ತರಾತಮ"ಗಳು ಇರೋಹಾಗೆ ನಮ್ಮ ಸೂಳೇಗಾರಿಕೇಲೂ ಇದೇವಮ್ಮಾ? ಕೋಪಿಸ್ಕೋಬೇಡೀವಮ್ಮಾ! ಹೆಂಗ್ಸು ಹೆಂಗ್ಸಾಗಲೀ, ಗಂಡ್ಸು ಗಂಡ್ಸಾಗಲೀ, ಮಹಾಯತ್ತು! ಆದರೇ ಹೊಸ ಹೊಸದಾಗಿ, ಪರಸ್ಪರ ಸ್ಕೀ, ಬಟ್ಟೆಗ್ಳು, ಸೀರೆ, ಒಡ್ವೆಗ್ಳೂ, ಈ ಬಾಬ್ತುಗ್ಳು ಎತ್ತ್ತೋದೂ ತಪ್ಪು! ಆದರೂ, ಗರತಿಯರ ಸಮಾಜಕ್ಕೆ ಶಿಖರವಾಗಿದ್ದರೂ ಅಹಂಭಾವ ಇಲ್ಲದ—ತಾವೂ, ಸೂಳೇರ ಕಸುಬಿಗೆ ಈ ಊರಿನಲ್ಲಾದ್ರೂ ತಕ್ಕಮಟ್ಟಿಗೆ—"ಶಿಖರ"!—"ಕಲಶ"!—ನಾನೇ ಅಂತ ಹೇಳಬಹುದಾದ ನಾನೂ, ಅಪೂರ್ವವಾಗಿ, ಸಂಧಿಸಿರೋವಾಗ ಚಿಕ್ಕ ಚಿಕ್ಕ ಮರ್ಯಾದೆಗ್ಳ ಒದರಿಬಿಟ್ಟು ಮಾತನಾಡೋಣ. ನೋಡೀವಮ್ಮಾ! ನೀವು ಕಟ್ಟಿರೋ ಸೀರೆ ಹೊಸಾಹೊಸ ಧರ್ಮಾವರ! ಪೆಟ್ಟಿಗೇಲಿ ಸರಿಯಾಗಿ ಮಡಿಸದೆ ಅದುಮಿಟ್ಟು ಹೊರಗೆ ತೆಗೆದಿದ್ದು! ಎಲ್ಲಿ ನೋಡಿದ್ರೂ ನಲುಗಿದೆ! ನನ್ನ ಸೀರೆ ನೋಡೀವಮ್ಮಾ!—ಜಂಬದ ಮಾತಲ್ಲಾ—ನಾವೀಗ ಮಾತಾಡೋ ಪಾಯಿಂಟ್‌ಗೆ ಸಂಬಂಧಪಟ್ಟದ್ದು—ಈ ನೀರಾಜಿ ಸೀರೆ ಸೀರಿಗ್ಯಾಕಿದ್ದು! ಇಂಥಾದ್ದು ನಾಲ್ಕು ಒಣಗ್ತಿವೆ ಮಡಿಕೋಲು ಮೇಲೆ—ಹಿಂದಿನ ಕೋಣೇಲಿ! ಇವುಗಳಲ್ದೆ ರಾತ್ರಿ ಬರೋ ಸ್ನೇಹಿತರ ಸಂತೋಷಕ್ಕೆ ಇಂಥಾ ನೀರಾಜಿ ಸೀರೆಗಳು ಡಜನ್‌ಗಟ್ಲೆ ಟ್ರಂಕ್‌ನಲ್ಲಿವ! ಅಲ್ದೆ,

ನನ್ನ ಕಿವೀಲಿ ಹಾಕ್ಕೊಂಡಿರೋ ಬೆಂಡೋಲೆ, ಐದೇ ಕಲ್ಲಾದ್ರೂ ಮುಕ್ಕಾಲು ಕ್ಯಾರಟ್ಟು ಒಂದೊಂದು ಕಲ್ಲೂ ಹಾಲೆಂಡು ಕಟ್ಟು! ಸೀಮೆ ಕಮಲ! ನನ್ನ ಮೂಗುತೀನೂ ಅಷ್ಟೇ ... ಇದಲ್ದೆ . ನನ್ನ ಕುತ್ತಿಗೇಲಿರೋ ಅಡ್ಡಿಕೇಲಿ ೨೪ ಕಲ್ಲು....ಅರ್ಧ ಅರ್ಧ ಕ್ಯಾರೆಟ್ಟು ಒಂದೊಂದು! ಇನ್ನು ಪದಕದ ಮಧ್ಯದಲ್ಲಿರೋ ಪಚ್ಚೆ ಕಲ್ಲೂ ಬೆಲೆ ಕಟ್ಟೋರಿಲ್ಲ! ಯಾವುದೋ ಒಂದು ರಾಜ ಕುಲದಿಂದ ಬಂದದ್ದು! ಈ ಮನೆ . ? ಮೂವತ್ತು ಸಾವಿರ ರೂಪಾಯಿಗೆ ಕೇಳ್ತಾರೆ! ಬೆಳಕವಾಡಿ, ಕೊಳ್ಳೇಗಾಲದ ಕಡೆ ಗದ್ದೆಗಳಿವೆ! ತೋಟಗಳಿವೆ! ಬ್ಯಾಂಕಿನಲ್ಲಿ ಮೂವತ್ತು ಸಾವಿರ ರೂಪಾಯಿ fixed deposit ಇಥೆ! ಇವೆಲ್ಲಾಮ್ಮಾ ಸ್ವಯಾ

ರ್ಜಿತ ನನ್ನೀ ಸೂಳೆಗಾರಿಕೇಯಿಂದ! ನಾನೇ ಸಂಪಾದಿಸಿದ್ದು
ಇದೆಲ್ಲಾಮ್ಮಾ. ದಾರೀ ಹೋಕರು, ಬೀದಿ ಹೋಕರು, ಕೂಲಿ ಗಳು, ಪುಂಡರೂ, ಸಾರಾಯಿ ಕುಡುಕರೂ, ಇವರಿಂದ ಸಂಪಾದಿಸಿದೇ ಅಂತ ತಿಳುಕೊಂಡಿದ್ಧೀರಾಮ್ಮಾ? ಹೀಗೇ, ಸೂಳೆ ಗಾರಿಕೇಲೇ ಹುಟ್ಟಿ, ಬೆಳೆದು ಬಾಳೋ, ನನ್ನಂಥಾ ನಾನೂರು —ನಾಲ್ಕು ಸಾವಿರ ಸೂಳೇರಿಗೂ **ನಮ್ಮ ಭಾಗ್ಯ ಇಲ್ಲದೆ, ಬೀಳಾಗಿ ಹುಟ್ಟಿ, ಬೀಳಾಗಿ ಬೆಳೆದು ಬೀಳಾಗಿ ಬಾಳೋ ನಾಲ್ಕೋ ನಲ್ವತ್ತು ಲಕ್ಷವೋ ಆದ ಸೂಳೆಗಳ್ನೆಲ್ಲಾ** ದಿನಕ್ಕೆ ಎಂಟಾಣೆ ಕೂಲಿ ಕೆಲ್ಸಕ್ಕೆ ನೇಮಿಸ್ತಾರಾಮ್ಮಾ ನೀವೂ ನಿಮ್ಮ ಕಮಿಟೀನೂ? ಮಸ್ಲ ಈ ಕೂಲೀ ಕೆಲ್ಸಕ್ಕೆ ಒಪ್ಕೊಂಡ್ರೇ, ನಾವುಗಳೆಲ್ಲರೂನೂವೇ ತಿಂಗಳ್ಗೆ ಹುಟ್ಟೋ ಹದಿನೈದು ರುಪಾಯ್ಲಿ ನಮ್ ಹೊಟ್ಟೇನ್ನೂ ಪೊರ್ಕೊಂಡು, ಅಲ್ದೆ ಸಾವಿರ್‌ಗಟ್ಲೆ ಪುಟ್ಟಾ ಗಳೂ—"Little Lady" ಅಂದ್ರಲ್ಲಾ--ಅಂಥಾ ಪುಟ್ಟಗ್ಳೂ ನಮ್ಮನ್ನ ಈ ಕಸುಬಿನಲ್ಲಿ ಹೊತ್ತು ಹೆತ್ತು ಸಾಕಿ, ಸೂಳೆಗಾರ್ಕೇಗ ಮುಪ್ಪಿನಲ್ಲಿ ಲಾಯಖ್ಖಿಲ್ಲದೆ ಒದ್ದಾಡೋ ತಾಯಿಗಳೂ, ಇದೂ ಅಲ್ಲದೆ ಹೆಂಗಸ್ರಾದ ನಮ್ಮ ದುಡ್ಡು, ಒಡವೆಗಳ್ನೂ ವಿಟರ ವಿಪತ್ತಿ ನಿಂದ ಕಾಪಾಡೋ ಸುಬ್ಬುಗಳೂ ಇವರೆಲ್ಲರ ಹೊಟ್ಟೆಗಳ್ನೂ ತುಂಬಿಸೋದು ಹ್ಯಾಗಮ್ಮಾ ನೀವು ನೇಮಿಸೋ ಎಂಟಾಣೆ ಕೂಲಿ ಕೆಲ್ಸದಲ್ಲಿ? (ಬೆರಳುಗಳನ್ನು ತೋರಿಸುತ್ತಾ—ವೀಣೆಯ ಮೇಲೆ ಆಡಿಸುವಂತೆ ಆಡಿಸುತ್ತಾ) ಈ ಬೆರಳು ನೋಡೀಮ್ಮಾ! ನಿಮ್ಮನೇಲೂ ವೀಣೇ ಇಧೇ ಅಲ್ಲವೇ!? ನಮ್ಮನೇ ವೀಣೇ
ನೂರೈವತ್ತು ವರ್ಷದ ಕಸುಬಿನೋರ ಮನೆತನದಿಂದ ಬಂದದ್ದು .! ಅದರ ದಂತದ ಕೆಲಸಕ್ಕೆ ಈಗ ಮುನ್ನೂರು ರೂಪಾಯಿ ಖರ್ಚಾಗುತ್ತೆ! ಅದರಲ್ಲೀಮ್ಮಾ ! ಮೊದಲನೇ ಋಷಭದಲ್ಲೀ ಧೈವತ ಕಾಕಲಿನಿ ಕೈಶಿಕಿ ನಿಷಾದ ನುಡಿಯುತ್ತಮ್ಮಾ. ಗಮಕದಲ್ಲಿ. ಇನ್ನು ಸ್ವರಗಳ್ನ ಆರುಕಾಲದಲ್ಲಿ ಕಣ್ಣು ಮುಚ್ಚಿ ತೆಗೆಯೋದರೊಳ್ಗೆ ಅರವತ್ತನಾಲ್ಕು ಸ್ವರಗಳ್ನ ಮೀಟುಹಾಕಿ

ಬಾರಿಸೋ ಗೈರತ್ತು ಇದೇನಮ್ಮಾ ಇವಕ್ಕೆ! ಇಂಥಾ ಬೆರಳುಗಳು, ಬೆತ್ತದ ಕೆಲಸಕ್ಕೆ ಬಗ್ಗುತ್ತವೇನಮ್ಮಾ? ಅದಕ್ಕೇ ನಾನು ಹೇಳಿದ್ದೂ ಆ ಗತಿಗೆಟ್ಟ ಕೈವಲ್ಯವಮ್ಮನ ಭೇಟಿಗಿಂತ ನಮ್ಮ ಈಗಿನ ಸ್ಥಿತೀನೇ ಮೇಲೂ ಅಂತ!!

ಲೇಡಿ ಶಿವ (ಕೈಗಳನ್ನು ಒಸುಕುತ್ತಾ) ಮತ್ತ್ ಇನ್ನೇನ್ ತಾನೇ ಮಾಡೋದಮ್ಮಾ ನಾವು ಸಹಾಯಕರಿಲ್ಲದ ತಂಗೀರ್ಗೆ ಸಹಾಯ ಮಾಡ್ಬೇಕೂಂತ ಪೇಚಾಡ್ತಿರೋ ನಮ್ಗಳ್ಗೆ, ನಿಮ್ಮ ಹಾಗಿರೋ ಅವರಿಗೆ, ತೀಕ್ಷ್ಣಬುದ್ಧಿ, ಅನುಭವ ಇರೋ ನೀವು, ನೀವೇ ದಾರಿ ಹೇಳಿಕೊಡಬೇಕಮ್ಮಾ!

ಸೂಳೆ ಯಾಕ್ ನೊಂದ್ಕೊಳ್ತೀರೀವಮ್ಮಾ? ನೀವಾಯ್ತು ನಿಮ್ ಯಜಮಾನ್ರಾಯ್ತು ಮನ ತುಂಬ ಮಕ್ಳು ಮೊಮ್ಮಕ್ಳು . ಸೌಖ್ಯ ಸಂತೋಷಾ, ಇವ್ನೆಲ್ಲಾ ಕಣ್ತುಂಬಾ ನೋಡ್ತಾ ನಿಮ್ಮ ಪುರಾಕೃತ ಪುಣ್ಯಾನ ಅನುಭವ್ಸಿ ಪರಮಾತ್ಮ ಕೂಗತ್ಲೂವೇ ಶಾಂತಮನಸ್ಸಿಟ್ಕೊಂಡು ಕಣ್ಮುಚ್ಕೋಕೆ ಸಿದ್ಧವಾಗ್ಬೇಕಾದ್ನೀವು ಪುರಾಕೃತ ಪಾಪಾನನುಭವಿಸ್ತಿರೋ ನಮ್ಮಗಳ್ನ ಕನಿಕರ್ದೊ ಆವೇಶದಲ್ಲಿ .. ಯಾಕೆ ನಮ್ಮ ನಮ್ಮ ಮಧ್ಯದಲ್ಲಿ ಬರ್ತೀರಾ?

ಲೇಡಿ ಶಿವ ಸತ್ಯವಾಗಿ ಹೇಳ್ತೀನಮ್ಮಾ, ನಿಮ್ಮ ಬಾಯಿಂದ್ಲೇ ಬಂದ "ಶಾಂತಿ"!, ನನ್ನ ಕೈಲಾದ ಮಟ್ಗೂ ನನ್ತಂಗಿಯರ್ಗೆ—ಜಾತಿ ಮತ ಅಲ್ದೆ ನೀವು ನನ್ನ ಮನಸ್ಸಿಗೆ ವಾದಿಸಿ ಹೊಂದಿಸ್ದ ಗಂಡಸ್ರು ಏರ್ಪಡಿಸಿದ ನಮ್ಮ "ಗರ್ತೀ" ಕಸುಬಾಗ್ಲೀ ಅದೇ ಗಂಡಸ್ರು ಏರ್ಪಡಿಸಿದ ನಿಮ್ಮ ಕಸುಬಾಗ್ಲೀ ಇವುಗಳಲ್ಲಿ ಸಿಕ್ಕೊಂಡು ಒದ್ದಾಡ್ತಿರೊ ತಂಗೀರ್ಗೆ—ನನ್ನ ಕೈಯಿಂದಾದ ಅಲ್ಪ ಸ್ವಲ್ಪ ಅಳಿಲ್ ಸೇವೇನಾದ್ರೂ ಮಾಡಿದೇ ಅಂತ ತೃಪ್ತಿ ಪಡೋ ವರ್ಗೂ ನನ್ಗೆ ಸಂತೋಷವೆಲ್ಲಿ?....ನನ್ಗೆ ಸುಖವೆಲ್ಲಿ? ..ಸಂತೋಷ್ವಿಲ್ಲಾ! ಶಾಂತಿ ಇಲ್ಲಾ !!....ಹೇಳ್ತೀನೆ ಕೇಳೀ! ನಮ್ಮೆಜಮಾನ್ರಿಗೂ ಅವ್ರ

ಸ್ನೇಹಿತರ್ಗಳ್ಗೂ ಎಲ್ರಿಗೂ, ಈ ಪುಣ್ಯ ಕರ್ಮದಲ್ಲಿ ತುಂಬಾ ಉತ್ಸಾಹ! ನಿಮ್ ಬುದ್ಧಿ ಚುರಕ್ತನದಲ್ಲಿ, ಸನ್ಮಾತಿನ್ನೆಷ್ಟ ಎತ್ತಾಕಿದ್ರೂನೂವೇ . ಈ ಕಸ್ಬ ಬಿಟ್ಟ ತಕ್ಷಣ ನಿಮ್ಮೆಲ್ಲರ್ಗೂ ಕೈಗಾರಿಕೆಯೋ ಇಲ್ಲಾ ಏನಾದ್ರೂನೂವೋ

ಸೂಳೆ [Caressing the Old Lady's face and features with her right arm and her own eyes dripping dew drops of love of sisterhood] ಚಿನ್ನದಂಥಾ ಮಗೂವಮ್ಮಾ ನೀವು! ಮೊಖಾನೂ ಚಿನ್ನ, ಮನಸ್ಸೂ, ಹೃದ್ಯಾನೂ ಚಿನ್ನ ಚಿನ್ನದ್ಹಾಗೆ ನಯ ಸರಳ ನಿಮ್ಮ ಸಂಸ್ಕಾರ ಫಲವಶಾತ್ ದೊಡ್ಡ ಕುಟುಂಬದಲ್ಹುಟ್ಟಿ ಬೆಳೆದು ತಂದೆ ತಾಯ್ಗಳು ಹಿಂದೆ ಮುಂದೆ ಯೋಚ್ನೆ ಮಾಡಿ ನ್ಯಾಸಾಗಿ ಮುಂದಕ್ಕೆ ಬರೋ ಬ್ರಹ್ಮಚಾರೀಗ್ ಕೊಟ್ಟು ಸಂಸಾರ್ದ ವಿಷಯ್ದಲ್ಲಿ ಯಾವ ಕೊರತೇನೂ ಬರದ್ಹಾಗೆ ಏರ್ಪಾಟೆಲ್ಲಾ ಮೊದಲೇ ಮಾಡ್ಕೊಟ್ಟ ನಿಮ್ಕುಟುಂಬಾನ್ ಕುದರಿಸ್ದ್ರೇ ನಿಮ್ಮ ದಾಂಪತ್ಯದಲ್ಲಿ, ನಿಮ್ಮ ವೃದ್ಧಾಪ್ಯದಲ್ಲಿ ಸಂತೋಷವಾಗಿ ಇಧೀರಾ, ನೀವು!! ನಿಮ್ಗಿರೋ ನಯ, ಸರಳವಾದ ಬುದ್ಧಿ, ಮನಸ್ಸು, ಹೃದಯ ನನಗಿದ್ದಿದ್ದಿತ್ತ್ರೇ, ಯಾವಾಗ್ಲೋ ಸಿಕ್ಕೊಂಡು ಚಿಟ್ಟೆ ಹುಳ್ದ ಹಾಗೆ "ಛಟ್" ಆಗ್ತಿದ್ದೆ ನಾನು ಈ ಸಮಾಜಾಂಬೋ ಗಂಡುಮೃಗ ಹತ್ತಿ ಆಳತಿರೋ ಈ ಮೆರವಣಿಗೆ ರಥದ ಚಕ್ರಕ್ಕೆ!! (ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ) ಕಬ್ಬಿಣವಾಗಿರಬೇಕಮ್ಮಾ ನಾವು! ನಿಮ್ಮ ಹಾಗೆ ಚಿನ್ನವಲ್ಲಾ! ಕಬ್ಬಿಣ!! . .ಕಬ್ಬಿಣದ್ ಬುದ್ಧಿ, ಕಬ್ಬಿಣದ್ ಮನಸ್ಸು, ಕಬ್ಬಿಣದ್ ಹೃದಯ! ಇದೆಲ್ಲಕ್ಕಿಂತ ಕಬ್ಬಿಣದ್ ದೇಹ ಇರ್ಬೇಕಮ್ಮಾ ನಮ್ಗೆ! ನಮ್ಮ ಕಸಬ್ನ .ಸೂಳೆ ಕಸಬ್ನ.... .ಕೊನೇವರಿಗೂ ನಿಭಾಯಿಸಿಕೊಳ್ಳೋಕೆ!! .. ...ಹುಟ್ಟಿ ಹಸುಳೆಯಾಗಿ ಹೊಸಲ್ ದಾಟಿ ಮನೆ ಮೆಟ್ಲು ಇಳಿದು ಸಮಾಜಾನ ಸೂಕ್ಷ್ಮಸು

ತ್ಲೂವೇ ಸಮಾಜದ ನಾಮಕರಣ ನಮಗೆ! "ಸೂಳೇ"! "ಸೂಳೇ"! "ಸೂಳೇ"ಂತ!! ಷುರೂಮ್ಮಾ ಆಗಿನಿಂದಾ ಸುಬ್ಬೂ ಹೇಳೋಹಾಗೆ Challengeಊ ನಮಗೂ ಸಮಾಜಕ್ಕೂ! ಸವಾಲು ಸೂಳೇರ್ಗೂ ಗರತಿಯರ್ಗೂ! ಆ ಸಮಾಜದ ಸಂಸಾರ ಮರೆತ ಗಂಡಸ್ರ ತೀಟೆಗೆ ಹುಟ್ಟಿದ ಆ ಮಗು ಬೆಳೆದು ಸೂಳೆಯಾಗಿ, ಬಂದ ವಿಟರು ಬಿಟ್ಟು ಹೋದ ರೋಗಗಳಿಂದ ಕೊಳತು ಸಾಯೋವರ್ಗೂ ಸವಾಲು! ಸೂಳೇರ್ದು! ಜವಾಬೇನೂ!? ಇದೇ ವಿಟರು ಅಗ್ನಿಸಾಕ್ಷಿಯಾಗಿ ತಾಳೀ ಕಟ್ಟಿದ ಗರ್ತೀರ ಜವಾಬೇನೂ? ಆಗ್ನಿಂದಾ ಸಾಯೋವರ್ಗೂ ಸವಾಲು! ಜವಾಬು! . ಈಗ ನಿಮ್ಮನ್ನ ಮಟ್ಟಿಗೂ ಮುಂದ್ಬಿಟ್ಟು ತಾವೆಲ್ಲಾ ಹಿಂದೆ ಮುದರ್ಕೊಂಡು ಇರೋ ಘಾಟಿ ಸ್ತ್ರೀಯರು "ಯಾರು? ಏನು? ಎತ್ತಾ?" ಅಂತಾ ನನಗೆ ಸಾಂಗೋಪಾಂಗವಾಗಿ ಗೊತ್ತು ಅಮ್ಮಾ! ಅವರುಗಳ ವಿಚಿತ್ರ ಚರಿತ್ರ—ನನಗ್ಗೊತ್ತು! (Laughs saidonically) ನಿಮಗ್ಗೊತ್ತಿಲ್ಲಾ ಹೆಂಗ್ಸಾಗಿ ಹುಟ್ಟಿದ್ದಕ್ಕ ಹೂತ್ತು, ಹೆತ್ತು, ಹತ್ತ ಕಂದಗಳು ಮುಂವಕ್ಕರೋದನ್ನೋಡಿ, ಕಣ್ಮುಚ್ಕೋದೇ ಹೆಂಗ್ಸಿನ ಐಹಿಕಾರ್ಥ ಅಂಬೋದ್ನ ಅರಿತು ತೋರ್ಸಿ ಕೊಟ್ಟಿಮ್ದೂ ನೀವೇ ಸಮಾಜಕ್ಕೆ!! ಅಪ್ರೋ!? (ಅಲ್ಪಸ್ಮಿತಳಾಗಿ) ನೀವು ಹಾಕಿದ ಮೇಲ್ ಸಂಕ್ರ್ತೀನ ಮರೆತು ಗಂಡ ಚಿಕ್ಕ ಕೆಲ್ಸದಲ್ಲಿದ್ದಾಗ, ತಂತಮ್ಮ ಪುಟ್ಟ ಪುಟ್ಟ ಸಂಸಾರದಲ್ಲಿ ಒದ್ದಾಡ್ತಿದ್ದು ತಂತಮ್ಮ ಕೂರತೇಲಿ ಕೂರಗ್ತಿದ್ದ ಪ್ರಾಣೀ ಗಂಡಂಗೆ ದೊಡ್ಕೆಲ್ಸ ಒದಗುತ್ತ್ಲೂನೂವೇ, ತಾನು ನೇದೋ ಭಾವೀಗ್ ಬದ್ಲಾಗಿ ಪಂಪುಗಳೂ, ಪೈಪುಗಳೂ, ತಾನು ಮುದುರಿಕೊಂಡಿದ್ದ ಮಾವಳ್ಳೀ ಬಿಲ ತಪ್ಪಿ, ಬಸವನಗುಡೀ ಬಂಗ್ಲೇನೂ ..ಶುಕ್ರವಾರ ಶನಿವಾರಾನೂ ತಪ್ದೇ ಕಾಲ್ನಡಿಗೇಲೆ ಹೋಗ್ತಾ ಇದ್ದ ಕಾಳಮ್ಮನ ಗುಡೀನೂ ತಪ್ಪಿ, ಮೋಟಾರ್ ಬಂಡೀಲಿ ಸುಳಿದಾಡ್ತಾ, ತನ್ನ ಕಸಬರಿಗೇನಾ .ಒಬ್ಬ ದೇವೇರಿಗೂ .

ತನ್ನ ಸೌಟನ್ನ ಒಬ್ಬ ನಾರಾಯಣನ್ನೂ, Charge ಒಪ್ಸಿ, ಗಂಡನ ಶುಶ್ರೂಷೆ ಗಲಾಟೆಗೆಲ್ಲಾ ತಪ್ಪಿಸ್ಕೊಳ್ಳುತ್ತಲ್ಲನೂವೇ, ಇದುವರೆಗೂ ಇದ್ದ. ಕೆಂಪುವಾಲೇ ತಪ್ಪಿ ಹೂಸದಾಗಿ ಬಂದ ಸೀಮೆ ಕಮಲದ ಬೆಂಡೋಲೆ ಬೆಳಕ್ನ ಬೀರ್ತಾ, ಕೈಬಳೆ ಹೋಗಿ WristWatch ಬಂದ ಕೈಗಳ್ನೂ ಬೀಸ್ತಾ ಲಾಲ್‌ಬಾಗೂ! ಕಬ್ಬನ್‌ಪಾರ್ಕೂ! ಬುಳ್ಳಾಚಾರಿ ಭಾಗವತ, ಪುಳ್ಳಯ್ಯನ ಪಿಟೀಲು ನಾನಾ ವಿಧಾ ಚಾರಿ ನಾಟ್ಕ, ಮೂಗಯ್ಯನ ಮುರುಳಿ, ರಾಮ ಣ್ಣೋರ ರಂಘೋಲು ಅಲ್ದೆ ಟಾಕಿ ನೂಕಿ ಇವ್ಗಳ್ಗೆಲ್ಲಾ, ವನದ ಹಾಗೆ ಗಂಡ ಮಡ್ದು ತಂದ ದುಡ್ನ, ತನ್ನ ದುಡ್ನ ಹಾಗೆ ಸಿಕ್ಕಾಪಟ್ಟೆ ಎರ್ಚೀ....ಎರ್ಚೀ, ಈ ವಿನೋದಗ್ಳೆಲ್ಲಾ ಬೇಜಾರಾಗಿ ತನ್ನ ಕಾಲಹರಣಕ್ಕೆ ತನ್ನ ಗಂಡನ ದುಡ್ನೇ ಸುರ್ಯೋಕೆ ಇದೊಂದು ಹೊಸ ದಾರೀನ ನಿಮ್ಮ ಕಮ್ಟಿ ಹುಡುಕ್ತಿರೋ ಹಾಗಿದ್ಯೇ ಹೊತರ್ೂ [ಮುಷ್ಟಿಗಳನ್ನು ಬಿಗಿಯುತ್ತಾ] ಏನ್ ಸಹಾಯಾ ತಾನೇ ಮಾಡ್ತಾರಮ್ಮಾ ನಿಮ್ಮ ಕವಿ.ಓಯೋರೂ?

....ಇದ್‌ವಗರ್ೂ ದೈವಾನ ಕಾಣಲಾರ್ದ ಪಾಪಿಗೇನೇ ಕಾಣಿಸ್ಕೊಳ್ಳೋಕೆ ದೈವಾನೇ ಪಾಪಿ ಹತ್ರ ಬಂದು ದರ್ಶನ ಕೊಟ್ಟದ್ದು ನನಗೆ ಹೆಮ್ಮೆ! ನಮ್ಮ ಕಸುಬಿಗೆ ಹೆಮ್ಮೆ! ನನ್ನ ಮನೇಗೆ ಹೆಮ್ಮೆ! ನಿತ್ಯ ಕನ್ನಿಕಾ ಪರಮೇಶ್ವರೀ ಹಾಗೆ ನನ್ನ ಕಣ್ಣಿಗೆ ಕಾಣಿಸ್ತಿರೋ ನಿಮ್ಮ ಸಂಸ್ಕಾರಕ್ಕೆ, ಕರ್ಮ ಫಲಕ್ಕೆ, ಹೆಮ್ಮೆ! ಆದರೆ ನಿಮ್ಮ ಕಮಿಟೀಗೆ ಮಾತ್ರ ಬುದ್ಧಿಗೇಡು! ನಾಚಿಗ್ಗೇಡು! ಹೆಂಗ್ಸ್ತೀಗ್ಗೇಡು!

ನೀವೆಲ್ಲೀಮ್ಮಾ! ಅವರೆಲ್ಲೀಮ್ಮಾ! (Laughs Saidonically) ಆ ಕಮಿಟೀ ಕ್ರಿಮಿಗಳೆಲ್ಲೀಮ್ಮಾ!? ಒಟ್ನಲ್ಲಿ ಇದುವಗರ್ೂವಾ ಈ ದೇಶದಲ್ಲಿ ನನ್ಹಾಗಿರೋ ನಾವೂನೂವೇ • ನಿಮ್ಹಾಗೆ ಈ ಕಾಲದಲ್ಲಿ ಅತಿ ವಿರಳವಾಗಿ ಇರೋ ನೀವೂನೂವೇ ಸಂಧ್ಸಿರೋದು ಸಮಾಜಕ್ಕೇ ಒಂದು ಹೆಮ್ಮೆಯೋ ಅಲ್ವೋ. ಇಲ್ಲಾ .ನನ್ನೀ ಜನ್ಮಕ್ಕೇನೇ ಮೊದಲೋ .!.. ...

ಲೇಡಿ ಶಿವ "ನಾವು"! "ನೀವು!" .ದೇವ್ರೇ ಗತಿ! ನಾನೇನೂ? ನೀವೇನೂ? (Puts both her hands on ಸೂಳೆ's shoulders) ಮಿಕ್ಕ ಹೆಂಗಸ್ರೇನೂ? (ಸೂಳೆಯು ಸೂಚಿಸಿದ ಪರಗಳನ್ನು ಸೂಚಿಸುತ್ತಾ) ಇದೇ ಸೀತೆ ಇದೇ ಸಾವಿತ್ರಿ ಅಲ್ದೆ ಇಲ್ಲಿಲ್ಲದ ಮಂಡೋದರಿ ಲೋಪಾಮುದ್ರೆ ಅನಸೂಯೆ ಅರುಂಧತೀನೂ ಇವರೆಲ್ಲಾ ಯಾಕೇ? "ಉಮಾ" "ಮಾ"ಗಳನ್ನೂ ಇವರನ್ನೆಲ್ಲಾನ್ನೂ, ನಿಮ್ಮನ್ನೂ, ನಮ್ಮನ್ನೂ ಸೃಷ್ಟಿಸಿದ್ದು ಒಂದೇ ದೇವತೆ!—ಆದಿಶಕ್ತಿ!—ಆಕೇನೂ ಹೆಂಗ್ಸು! ನಿಮ್ಹಾಗೇನೂ ನಮ್ಹಾಗೇನೂ ಹೆಂಗ್ಸು! ಮೂರ್ ಕಣ್ಣಿದ್ರೂ ಒಂದೇ ಕಣ್ಣಿಂದ ನೋಡೋ ದೇವತೆ! ನಾವ್ಹೆಂಗಸ್ರೆಲ್ಲಾ ಆಕ ಕಣ್ಗೆ ನಾವೆಲ್ಲಾ ಮಕ್ಳು ಅಂತ್ಲೂ, ಅಕ್ಕತಂಗಿಯರೂ ಅಂತ್ಲೂ, ನಂಬಿರೋ ನನ್ಗೆ ನಂಜ್ಗೇ ಮೇಲೆ ಮಾತಾಡೋಕೆ ಬಂದಿರೋದು ನಾನು! "ಪಾಪೀಂತಂದ್ಕೊಂಡ್ರಲ್ಲಾ!' **ಪಾಪ ಯಾರದು?** ನಮ್ದು ಅಲ್ಲಾ "ನಾವೆಲ್ಲಾ"ಂದ್ರಲ್ಲಾ ಆ ನಿಮ್ದು ಅಲ್ಲಾ, ಯಾರ್ದು ಅಲ್ಲಾ **ಆದ್ರೂ ನೂವೇ ನಮ್ಮೆಲ್ಲರ್ದು!! ನಮ್ಮ ಸಮಾಜದ್ದು!** ವ್ಯಕ್ತಿಗ್ಳು ಸಮಾಜ್ದಲ್ಲಿ ಹುಟ್ಟಿದ್ದಕ್ಕ ತಂತಮ್ಮ ಸಾಮಾಜಿಕ ಜವಾಬ್ದಾರಿ ಅರಿಯಂತ್ಲೂನೂವೇ ಪರಸ್ಪರ ಸಹಾಯಮಾಡ್ದೆ ಶಾಸ್ತ್ರೋಕ್ತ "ಸಮಾಜ ಋಣ"ವಾದ "**ಸಮಾಜ ಸೇವೇ**"ಂಬೋ ಸ್ವಧರ್ಮಾನ ಮರ್ತು ಮುಲೇಗೆ ಒಮರಿದ್ದಲ್ದೆ ಪರಕೀಯ ಜನರ ಭಾಷೆ, ನಾಗರೀಕತೆ ಇತ್ಯಾದಿ ಸಂಪರ್ಕಕ್ಕ ಸೋತು, ಸ್ವಧರ್ಮಾನೇ ತೊರೆದು "ಹೊಸ ನಡಿಗೆ ಬರ್ಲೇ ಇಲ್ಲಾ, ಹಳೆ ನಡಿಗೆ ಮರ್ತೇ ಹೋಯ್ತು"! "ಹಂಸ ನಡೆ ಕಲಿಯೋ ಆಸೇಲಿ, ಕಾಗೇ ನಡೆ ಮರಿಯೋದೇ!"?? ಅಂತ ಹೀಗೆ ಒದ್ದಾಡ್ತಿರೋದು ನಮ್ಮ ಈಗಿನ ಸಮಾಜದ ಪಾಪ!! (ಮುಗುಳುನಗೆಯಿಂದ) ನಾನೂ ನಿಮ್ಹಾಗೆ—ನಿಮ್ಮ Little Lady... ಪುಟ್ಟಾನ ಹಾಗಿರೋ ಮಕ್ಕಳ್ನ ಹೆತ್ತೋಳು! ಒಂದಲ್ಲ! ಎರಡಲ್ಲ!

ಒಂಭತ್ತು ಮಕ್ಕಳು !! ನಾನೂ ನೀವೂ ಈ ಸಮಾಜದ ಕಣ್ಣಿಗೆ ಬೇರೆ ಬೇರೆಯಾದ್ರೂನೂವೇ ನನ್ಮನ್ನೆಲ್ಲಾ ಸಮವಾಗಿ ಕಾಣ್ತಿರೋ ಆ ದೇವತೆ ಕಣ್ಗೆ. (Pointing out with her forefinger to a Chamundi picture be decked with flowers and begrimed with saffron & turmeric) ತನಗೆ ಇತರರು ತಾನೇಂತ, ನಾವೆಲ್ರೂ ಒಬ್ಬರಿಗೆ ಮತ್ತೊಬ್ರು ಒಬ್ರೇಂತ, ಅರಿಯಲಾರ್ದೆ ಒದ್ದಾಡ್ತಿದೇವೇಂಬೋದು ನನ್ನ ಹೃದಯಕ್ಕೆ ಹೊಳೆದ ಮೇಲೇನೇ ನಾನ್ ಬಂದಿರೋದು ನಿಮ್ಮೊಂದಿಗೆ ಮಾತಾಡೋಕೆ !

**ಸೂಳೆ :** (ಭೃಕುಟಿಗಳನ್ನು ರಚಿಸುತ್ತಾ, ಅಲ್ಪ ಬಿರುಸಾಗಿ) "ಮಾತಾಡೋಕೆ" ?! ಅರ್ಥ್ವಾಗ್ಲಿಲ್ಲ ! ಏನ್ಮಾತವ್ಮಾ ? ದೇವರ್ ಕಣ್ಗೆ ...ನೀವೂ, ನಾನೂ, ಎಲ್ರೂ ಒಂದೇ ಒಂದೂಂತ ನೀವೆಷ್ಟ್ ಕೊಂಡಾಡ್ಕೊಂಡ್ರೂನೂವೆ, ಸಧ್ಯ ನಮ್ಮಾ ಊರಿನ ಸಮಾಜದ ಕಣ್ಣಿಗೆ, ಸೀತಾದೇವಿ ರವಿವರ್ಮನ ಪರದಲ್ಲೇ !, ನೀವು ನಿಮ್ಮ ಯಜಮಾನ್ರ ಬಂಗ್ಲೇಲೇ ! ನಾನು ನನ್ನೀ ಸೂಳ ಕೊಂಪೇಲೇ ! (Pointing out the selfsame picture of Chamundi, ಬಿರುಸಾಗಿ) ಆದಿ—ಅನಂತ—ನಿತ್ಯ ಕನ್ನಿಕಾ ಪರಮೇಶ್ವರೀ ಪ್ರತಿಮೇನೂ ಅವರವರ ಮನೇಲೇ !! ಪೂಜ-ಅಲಂಕಾರ-ಸಮೇತ !! ಹ್ಯಾಗೆ ಬಿಡಿಸ್ತೀರಾಮ್ಮಾ ಈ ಒಗಟೀನಾ ? (Laughs gurglingly)

**ಲೇಡಿ ಶಿವ** (Stroking ಸೂಳೆ's hand and joining in the laughter) ನೋಡೀವ್ಮಾ ! ನನ್ ದೊಡ್ಮಗ್ಳು, ಹೆಚ್ಚೂ ಕಮ್ಮಿ ನಿಮ್ಮ ವಯಸ್ಸು . "ನಾವು" "ನೀವು" ಅಂದ್ರಲ್ಲಾ ! ..., ಆ ನಾವು ನಮ್ಮ ನಮ್ಮ ಐಹಿಕ ಸಂತೋಷಗಳಲ್ಲಿ ನಮ್ಮ ಹೊಟ್ಟೇಲಿ ಹೊತ್ತು ಹೆತ್ತು ನಮ್ಮೆದ್ರಿಗೆ ನಲಿದಾಡೋ ಮಕ್ಕಳ್ಳ ಸಂತೋಷಪಡ್ನೊ ದಾಹಾನ ತೀರಿಸ್ಕೊಂಡು ನಂ ನಂ ಸಂತೋಷ್ದಲ್ಲಿ

ಮುಳುಗಿರೋ ನಾವು ಈ ಸಂತೋಷ ಇಲ್ಲದೇನೂ, ದೇವ್ರ್ರೆದುರ್ಗೆ, ತಂಗೀರಾಗಿ, ನಾವಿರೋ ಸಮಾಜಕ್ಕೆ ಒಳಪಟ್ಟಿದ್ರೂ ನೂವೇ, ದಿಕ್ಕಿಲ್ದೆ, ದೇವರ ದಯನಿಲ್ದೆ ಕಂಗೆಡ್ತಿರೋ ನನ್ನ ತಂಗಿಯರ ಏಳಿಗೇಗೇಂತ ಏರ್ಪಾಡು ನಮ್ನಮ್ಮಲ್ಲೇ ಮಾಡ್ಕೊಂಡ ಹಲವು ಕೆಲವು ಅಕ್ಕತಂಗಿಯರ ಸಂಘಕ್ಕೆ ಪ್ರೆಸಿಡೆಂಟ್ ನಾನು!! ಹ್ಯಾಗ್ಹೇಳ್ಲೀ!? ಕೋಪ್ಮಾಡ್ಕೋಬೇಡೀ! (ಕೈಯನ್ನು ದೂರ ಮಾಡುತ್ತಿರುವ ಸೂಳೆಯ ಕೈಯನ್ನು ತನ್ನೆರಡು ಕೈಗಳಿಂದಲೂ ಹಿಡಿದು) ನಿಮಗಿಂತ ಹಿರಿಯಳು ನಾನೂಂತ ಮೊದಲೇ ಹೇಳಿದ್ದೇನೆ ನಾನೂ! ನಮ್ತಂಗೀರಾದ ನಿಮ್ಮಗಳ ಏಳಿಗೇಗೆ ಧನಸಹಾಯವೇ ಅಲ್ಲದೆ, ಏನ್ ಸಹಾಯವೇ ಆಗ್ಲೀ ಮಾಡೋಕೆ ಸಿದ್ಧ!! (ಸೂಳೆಯು ಕೈಯನ್ನು ಮತ್ತೆ ಸವರುತ್ತಾ) "ನೀವು ಹೀಗಿರುವುದು ಅನ್ಯಾಯ ಸಮಾಜದ ಅನ್ಯಾಯ . ಅಪಮಾನ . .ಸಮಾಜಕ್ಕಪಮಾನ ಸಮಾಜದ ಪಾಪ" ಅಂತ ತಿಳ್ದು ಈ ನಿಮ್ಮ ಜೀವನವನ್ನ ಬಿಟ್ಟು ಏಳಿಗೆಯನ್ನು ಹೊಂದೋಕ ಬೇಕಾದ ಸಹಾಯನೆಲ್ಲಾ ಒದಗ್ಸೋ ಸಮಾಜ ಸೇವೇಗೇನೇ . ಎದ್ದು ಸಿದ್ಧರಾಗಿ ನಮ್ನಮ್ಮ ಹೆಂಗಸ್ರು ನಾವ್ನಾವೇ ಏರ್ಪಡಿಸ್ಕೊಂಡಿರೋ ಒಂದು ಕಮಿಟಿಯ ಪರವಾಗಿಯೇ ಅಲ್ದೆ ನಿಮ್ಮ ಪುಟ್ಸ್ಕಾ, "ಎಲ್ಲಾ Nasty" ಅಂದ ಹಾಗೆ "ಮಾತಾನಾಸ್ತಿ ಪಿತಾನಾಸ್ತಿ ನಾಸ್ತಿ ಬಂಧು ಸುಹೃಜ್ಜನಾ। ವಿತ್ತನ್ನಾಸ್ತಿ ಕ್ಷಿತಿರ್ನಾಸ್ತಿ ತಸ್ಮಾತ್ ಜಾಗ್ರತ ಜಾಗ್ರತ।"— "ಇಹ ಜೀವನ್ವೇ ಒಂದು ಕನ್ಸು! ಈ ಕನಸ್ನೇ ಕೊರ್ದು ಕಣ್ಬಿಡೋದೇ ಮನುಷ್ಯನ ಕರ್ತವ್ಯಾ"ಂತ ತಿಳಿಕೊಂಡಿದ್ರೂ ನೂವೇ, ಇದೇ ಕನಸಿನ ನಾಟ್ಕದಲ್ಲಿ, ಆಡೋ ನಾವು "ರಾಜ-ಮಂತ್ರಿ-ಪಾರ್ಟ್‌ಗಳ್ನು-ಹೊಟ್ಟೇಪಾಡ್ಗೇ"ಂತ ಬಣ್ಣ ಬಳ್ಕೊಂಡು ಹಾಡಿ, ಮಾತಾಡಿ ಕುಣಿಯೋ ಹಾಗ್ಯೇಂತ ನಮ್ಮಲ್ಲಿ ನಾವು ತಿಳಿದ್ರೂನೂವೆ, ಅವರು ಮೆಟ್ಟಿದ ರಂಗ ಸ್ಥಳಾನಾ ಬಿಟ್ಟು ಬರೋವರ್ಗೆ ..ರಾಜನ ವೇಷ ರಾಜನ್ಹಾಗೂ, ಕಟುಕನ ವೇಷಾ

ಕಟುಕನ್ನಾಗೂ, ಮಂತ್ರಿ ವೇಷ ಮಂತ್ರಿ ಹಾಗೂ ತಾತ್ರವ್ಯದ ಅಭಾವಿಲ್ದ ತನ್ನುನ್ನುಲ್ಲ ವೇಷಗಳ್ನ ತಾನೇ ಒಪ್ಪ್ಕಂಡು ವಹಿಸಿ, Stage ಮೇಲೆ ಸಲ್ಲಿಸಿ ಮುಗ್ಸಿ, ಎಲ್ಲಾ ಒಂದಾ । ವೇಷಗನ್ನ ನಾಟಕ್ದೋರು ಅಳಿಸ್ಕೊಳ್ಳೋ ಹಾಗೆ ಈ ಸಮಾಜ ಅಂಬೋ ಕನಸಿನ ನಾಟಕಕ್ಕೆ ನಾವು ಇಳಿವೆ, ಬಟ್ಟೆ ಮೇಲೆ ಸೂಳೇ ಯೇನೂ - ಗರ್ತೀಯೇನೂ ! ನೀರಾಜಿಯೇನು ! - ಹಡಕಲು ಸೀರ ಯೇನೂ ! ತಾಳೀ ಏನೂ ? ವಜ್ರದ ಅಡ್ಡಿಗ ಏನೂ "ನಾವೂ" "ನೀವೂ" "ಇವರೂ" "ಅವರೂ" ! ಹೀಗೇ ನಮ್ಮ ನಮ್ಮ ವೇಷಗಳ್ನ ಪುರಾಕೃತ ಪಾಪಪುಣ್ಯಗಳಿಂದ ಗ್ರಹಿಸಿ ವಹಿಸ್ಬಿಟ್ಮೇಲೆ "ಕಷ್ಟ" "ಸುಖ" ಅಂಬೋ ಮಾಯೆಗೆ ಅಂಧ ರಾದ ನಾವು ಸುಖಾನುಭವಿಸೋದು ವ್ಯರ್ಥಾನಿಲ್ವ ಲೋಕದಲ್ಲಿ ಒದ್ದಾಡೋ ಇತರ್ರಿಗೆ ಸಹಾಯಮಾಡೋದೇ ಆತ್ಮಧರ್ಮ ಅಂತ ನನ್ನ ಹೃದಯಕ್ಕೆ ಹೊಳೆದು ನಾನು. ಹಾಗ್ಯೇನೇ ನೀವೂನೂನೇ "Baby Welfare Fund" ಅಲ್ಲದೆ ಇತರ ಧರ್ಮಗಳ ವ್ಯವಸ್ಥೆಗೆ ಕೊಟ್ಟಿರೋ ಧನ ಸಹಾ ಯಾನೂ ಅಲ್ಲದೆ ನೀವೇನೇ ಸಮಾಜದ ಅನಾಥ ಪೋಷಕ ಸಂಘಕ್ಕೆ ವೀಣ ಕಛೇರಿ ಮಾಡಿ ಸಂಪಾದಿಸಿ ಕೊಟ್ಟ ನೀವೂ ನೇರಿ .

**ಸೂಳೆ** (Lady Sನ ಕೈಯನ್ನು ತಾನು ಕೂತಿರುವ ಕುರ್ಚಿಯನ್ನೂ ಥಟ್ಟನೆ ಬಿಟ್ಟು ಪಕ್ಕದಲ್ಲಿರುವ ದುಂಡು ಮೇಜಿನ ಆಚೆರ ಭಾಗದ ಕುರ್ಚಿಯ ಮೇಲೆ ಕೂತು, ಅಲ್ಪ ಕ್ರೂರ ಧ್ವನಿಯಲ್ಲಿ) ಕ್ಷಮಿಸ್ಬೇಕಮ್ಮಾ ನನ್ನಾಸ, ನನ್ನ ಧರ್ಮ ನನ್ದು ! ಮಿಕ್ಕೋರ್ದಲ್ಲ ಕ್ಷಮಿಸಿ ! ನಿಮ್ದೂ ಅಲ್ಲ ! ನನ್ದು ! ಆ ಧರ್ಮದ ಮಾತೆಲ್ಲಾ ತುಂಡ್ಬಾರ, ದಯವಿಟ್ಟು ! ಕ್ಷಮಿಸಿ ! ನನಗೇನೋ ತೋಚಿತು ! ಸೂಳೇ ರಾದ್ರೂ ನಾವು, ಕಣ್ಣು, ಕೈ, ಕಾಲು, ಮೈ ದೇವರು ನೆಟ್ಟಗೇ ಕೊಟ್ಟಿದ್ದಾನೆ ನಮಗೆ ! ಆದರ ಸೂಳೆಯಾದ ನಾನೂ

ಕೂಡ ಕನಿಕರಿಸದೆ ಕಾದ, ಪಂಚೇಂದ್ರಿಯಗಳು ಐದಾಗಿರೋ ಪ್ರಾಣಿಗಳಿಗ, ನಾನು ಸಹಾಯ ಮಾಡೋ ಸ್ಥಿತೀಗೇ ಬಂತೇ ? ಅಂಬೋ ಆವೇಶ್ದಲ್ಲಿನ್ಮಾ ನನ್ನ ಕಚೇರಿ ಅರಕ್ತ ಪ್ರೇಕ್ಷಕ ಸಂಘದಲ್ಲಿ ! ನೀನೆ ಬಾರಿಸಿದ್ದು ನಾನು, ಮೊದಲನೇ ಕೊನೇ ಸರ್ತಿ ಅಲ್ವೇ !! ಇದಲ್ಲಾ ಯಾರವ್ವಾ ? ಒದ್ದೇ ಪೇಷ್ಟ್ರೀನ (ಗಂಭೀರವಾಗಿ) ನೀವಿದುವರಗೂ ಹೇಳಿದ ಧರ್ಮಾರ್ಧರ್ಮದ ತಿರುಳು ಇಷ್ಟು ! ನನಗೆ ತೋಚಿದ ಮಟ್ಟಿಗೂ ಇಷ್ಟು ! ಸಮಾಜದಲ್ಲಿ ತಾವು ತಾವು ಕೊಟ್ಟು ಇಟ್ಟಿದ್ದ ಪುರಾಕೃತ ಪುಣ್ಯ ಪ್ರಭಾವದಿಂದ ತಾವು ತಾವು ಅನುಭವಿಸ್ತಿರೋ ಸುಖಗಳ್ನ ತಿಂದು ತೇಗ್ತಿರೋ ಗಲಾಟೇಲ, ಒಬ್ಬರೋ ಇಬ್ಬರೋ ಹೆಂಗಸ್ರು, ತಾವು ಅನುಭವಿಸೋ ಸುಖವಿಲ್ಲದ ಅನ್ಯರ ದುಃಖಾನ ನೀಗಿಸೋಕೆ ತಮ್ಮನ್ನ ಮಮತೆಯಾದ ಗಂಡಸ್ರು ಸಂಪಾದಿಸಿದ ಧನಾನಾ ಸಮ್ಮ ಸಹಾಯಕ್ಕೆ ಸುರ್ಯೋಕೆ ಸಿದ್ಧವಾಗಿ ರೋದು ನಿಮ್ಮಂಥಾವ್ರು ! ಇಂಥಾ ನಿಮ್ಮ ‘‘ಕವಿನ್ಟಾ’’ನೂ ಸಾಕು, ಈ ಕಮಿಟಿ ಹೆಂಗಸ್ರ ಸಹವಾಸಾನೂ ಸಾಕು ! ನಾವು ಮಾಡದ ತಪಸ್ಸಿನ ಫಲ, ಬೇಡದವರ ಕೈಯಿಂದ ಬೇಡ ! ನಮಗೆ ! . ನಮಸ್ಕಾರ !!

**ಲೇಡಿ ಶಿವ** [ಕುರ್ಚಿಯಿಂದೆದ್ದು, ಮೇಲಕ್ಕೆ ಬಾಗಿ ಸೂಳೆಯ ಭುಜವನ್ನು ಸವರುತ್ತಾ] ಹಾಗಲ್ಲಾವ್ವಾ !!

**ಸೂಳೆ** [ಎದ್ದು ನಿಂತು] ಕೋಪಿಸ್ಕೋಬೇಡಿವ್ವಾ ! [ಅಲ್ಪಸ್ಮಿತ ಮುದ್ರಿತಳಾಗಿ] ಕೋಪಿಸ್ಕೋಬೇಡೀವ್ವಾ ನಿಮ್ಮ ಪರಿಚಯ ಆದ ಈದಿನ ಸುದಿನವೇಂತ ನನ್ನ ಹೃದಯಕ್ಕೆ ತಾಕಿದ್ರೂನೂವೇ ನೀವು ‘‘ಕವಿನ್ಟಾ’’ಂದ್ರಲ್ಲ ಆ ಹೆಂಗಸ್ರ ಪೂರ್ವಪಶ್ಚಿಮ ವಲ್ಲದೆ, ಉತ್ತರ ದಕ್ಷಿಣಾನೂ ನನಗ್ಗೊತ್ತೂ ! ನಿಮಗ್ಗೊತ್ತಿಲ್ಲಾವ್ವಾ !! [Lady S ಅನ್ನು ನಯವಾಗಿ ಕೂಡಿರುತ್ತಾ] ಕೂತ್ಕೊಳ್ಳೀವ್ವಾ ! ಕೂತ್ಕೊಳ್ಳಿ. [ಇಬ್ಬರೂ ಕುಳಿತುಕೊಳ್ಳುವರು]

ಲೇಡಿ ಶಿವ (ಕುಳಿತ ಕುರ್ಚಿಯುನ್ನು ಎಳೆದು ಕುಳಿತು, ಸೂಳೆಯುನ್ನು ಸಮೀಪಿಸಿ ದಕ್ಷಿಣ ಹಸ್ತವನ್ನು ಸವರುತ್ತಾ) "ಸುದಿನ ?" ನಿಮ್ಮ ಪರಿಚಯು ನಿಮ್ಮ ಪುಟ್ಟಾನ ಪರಿಚಯು ಆದದ್ದು ನನಗೆ ಸುದಿನ !

ಪುಟ್ಟಾ (Re-entering with flushed and scratched force, torn frock and yet with a triumphant gleam in her eyes, running into her mother's lap in Joyous Voice) ಅಮ್ಮಾ ! ಇಲ್ನೋಡು ! (Points outs a scratch on her cheek)

ಸೂಳೆ ಏನೇ ಪಟಿಂಗಿ, ಏನ್ ಜಗಳಾನೇ ? ಯಾರ ಜೊತೇಲೇ ? ಇಲ್ನೋಡೇ (Pointing out to Lady S) . ಇವರ್‍ಯಾರೇ?

ಪುಟ್ಟಾ · (Stands up and folds her hands) ನಮುಶ್ಟೇ !

ಸೂಳೆ : ಯಾಕೇ ಇವರ್ಗೆ ನಿನ್ನ ನಮುಶ್ಟೇ? ಯಾರೇ ಇವ್ರು ?

ಪುಟ್ಟಾ ದೊಡ್ಮನ್ಸ್ರು

ಲೇಡಿ ಶಿವ (Gathering up Putta in her arms and hugging and kissing and re kissing Putta's brows, eyes, lips, neck and eyes again) ನಾನು ದೊಡ್ಮನ್ಸ್ರು ಆದ್ರೆ, ನೀನ್ಯಾರೆ, ಕಂದಾ ?

ಪುಟ್ಟಾ ನಾನೂ **ಚೂಳೇಮುಂಡೆ** ! (laughs)

ಸೂಳೆ : (Dragging her from Lady S) ಯಾರೇ ಹೇಳಿದ್ದೂ ? (her eyes blaze and belch fire).

ಪುಟ್ಟಾ ಬಿಡೂಮ್ಮಾ ! ... . ನೋಯತ್ತೆ ! ನನ್ನ ಚೂಳೆಮುಂಡೆ ಅಂದದ್ದು ಎದುರ್‌ಮನೆ ಚರ್ಚು ! ಅವಳ್ ಮುಖವೆಲ್ಲಾ

ಪರಚ್ಬಿಟ್ಟೆ ! ಒಂದೇ ರಕ್ತ ! (in a triumphant haranguing blare) ಇದೇನು ! (Pointing to her cheek) ಅವಳ್ ಮೂತೀನ್ ನೋಡ್ಬೇಕು ! ಬಡುಕೊಳ್ತಿದಾಳೆ ಅವರಮ್ಮ ! ಅವಳ ಕೈಗೆ ಶಿಕ್ಕದಾಗೆ ಓಡಿ ಬಂದ್‌ಬಿಟ್ಟೆ ! (Strikes a dramatic attitude and laughs sardonically and whole—heartedly) ಬರ್ಲಿ, ನಾಳೆ ಬೀದೀಲಿ ! (grinding her teeth—her face like a young tiger cub) ಕಣ್‌ಕಣ್ಣೇ ಪಚ್ತೇನೆ ! "ಚೂಳೆ" ಅಂತೆ ನಾನು ! "ಮುಂಡೆ" ಅಂತೆ ನಾನು ! ಬರ್ಲಿ ನಾಳೆ ಬೀದೀಗೆ !

ಸೂಳೆ ಸುಬ್ಬೂ (Subbu enters) ಎದುರ್‌ಮನೆ ಸರ್ಸು ಜೊತೆಗೆ ಜಗಳಾ ಆಡಿ ಪರ್ಚಿ, ಮುಖ ಪರ್ಚಿಸ್ಕೊಂಡ್ ಬಂದಿದಾಳೆ ! ರಕ್ತ ಕಂಡ್‌ಬರೋ ಜಾಗ್ದಲ್ಲಿ ಅಯೋಡಿನ್ ಹಾಕ್ಬಿಟ್ಟು ಎದುರು ಮನೇಗೆ ಹಾರಿಹೋಗಿ ಆ ಮಗೂಗೆ—ಏನಪಾಯ ಆಗಿದೆಯೋ ಏನು ಬೇಕೋ ಅಯೋಡೀನೋ, Iodoform ಓ ನೋಡ್ಕೊಂಡು ವಿಚಾರಿಸ್ಕೊಂಡು cotton ಇದೆ, Lint ಇದೆ ಕೈಯಲ್ಲಿ ತಕ್ಕೊಂಡ್ ಹೋಗಿ ಮಾಡಬೇಕಾದ್ ಮಾಡೀ "ಮಕ್ಕಳ ಜಗ್ಳಾ—ದೊಡ್ಡೋರು ಮನಸ್ತಾಪ ಪಟ್ಕೋಬಾರ್ದು"ಂತ ಸಮ್ಝಾಯಿಸ್ಕೊಂಡು ಬಂದು ಸೇರು ! ಓಡು ! ಒಂದೇ ಓಟ ಸುಬ್ಬೂ ! [Subbu picks up Putta and exits R precipitately] ನೋಡಿದ್ರಾಮ್ಮಾ ! (ಸೂಳೆ standing up to Lady S who also standsup) ಷುರು ! ನಮ್ಗೂ ಸಮಾಜಕ್ಕೂ ನಮ್ಮ ಪುಟ್ಟಾನ "Little Lady" ಅಂದ್ರಿ ನೀವು ! ಈ Little Ladyನ ಎದುರ್‌ಮನೆ ಸಂಸಾರಿಗ್ಳು "ಸೂಳೆಮುಂಡೆ" ಅಂದದ್ದಕ್ಕೆ ನಮ್ ಪುಟ್ಟಾ ನೋಡಿ ! ಎದುರ್ಮನೆ ಸರ್ಸು ಮುಖ ಪರ್ಚಿ ಬಂದಿದಾಳೆ ! ಇದೇ ನೋಡೀ ! ನಮಗೂ

ಸಮಾಜಕ್ಕೂ ಇರೋ ಸನ್ನಿವೇಶ! ಏನ್ ಹೇಳ್ತೀರಾ (Her eyes spitting sparks of fire) ನಿಮ್ಮ ಮೃದುವಾದ ಹೃದಯ "ಚಿನ್ನಾ"ಂದೆ! ನನ್ನ ಮೃದುವಾದ ಹೃದಯ ಪ್ಲಾಟಿನಂದ! ನಮ್ಮ ಪುಟ್ಟಾನ ಹೃದಯ ಒಡ್ದು, ಕ್ರಿಸ್ಟಲ್, ಆತ್ಮನ್ನಾ "ಉಕ್ಕು" ಮಾಡಿ, ಈ ಸಂಸಾರಗಳ ಸಹಾಯಕ ಜವಾಬಾರಿ ಮಾಡಿಬಿಟ್ಟೇ ನಾಯ್ತೇನೆ ನಾನು! ಈಗೇನ್ ಹೇಳ್ತೀರಾಮ್ಮಾ!?

**ಲೇಡಿ ಶಿವ** ನನಗೂ ನಿಮಗೂ ಒಂದು ವ್ಯತ್ಯಾಸಾನೂ ಕಾಣ್ತಾದಿಲ್ಲಾಮ್ಮಾ! (ಬಿಕ್ಕಿಬಿಕ್ಕಿ ಅಳುತ್ತಾ) ನನ್ಗೂ ನಿಮ್ಗೂ, ನನ್ನ ಅಲಮೇಲೂಗೂ, ನಿಮ್ಮ ಪುಟ್ಟಾಗೂ, ಏನೂ ವ್ಯತ್ಯಾಸಾ ಕಾಣೋದಿಲ್ಲ ನನ್ ಕಣ್ಣಿಗೆ! ಈಗ ನೀವು 'ಏನು ಹೇಳ್ತೀರಾ?" ಅಂದ ಪ್ರಶ್ನೇಗೆ ಉತ್ತರ ನನಗ ಒಂದೂ ತೋಚೋದಿಲ್ಲ! ನಿಮ್ಮಗಳ ಸ್ಥಿತೀನ ಸ್ವಲ್ಪ ಯೋಚ್ನೆಮಾಡೋಕೇಂತ ಬಂದಾಗ ನನ್ ಮನಸ್ಸೇ ಕೇಳಾಗಿದೋದಾಗ ನನಗೆ ಒಂದೂ ತೋಚ್ತು! [Sobbing hysterically collapses on Sooli's shoulders ಸೂಳೇ gathers her up tenderly] ನುಬ್ಬು ಪ್ರೈಸಗಳ ಹೇಳಿ "ಕಾರ್ ಸ್ಟಾರ್ಟ್ ಮಾಡೂ" ಅನ್ನ! ಬಿಟ್ಟಿ, ಹಣ್ಣು ಹಂಪಲು, ವಗೈರೆ ಕಾಣಿಗೆ ನಾಗ್ ನನ್ನ್ಮನೇಗ ಬಂದ್ರೆ ಹಾಗೆ ಬಂದ ಈ ಪ್ರಾಣೀನ ನಾನು ಕಂಡ್ತರ್ನೆ! (ಗಟ್ಟಿಯಾಗಿ) ಅಮ್ಮಾ!! (ತಾಯಿಯು ಒಳಗಿನಿಂದ ಬರುವಳು)

[Half leads and half carries Lady Sivadasa Iyer caressingly mid l, with help of her mother After one minute the curtain drops slowly ]

—— ——

ಥಟ್ಟನೆದ್ದು, ಸೀಸೆಯಿಂದ ದ್ರಾವಕವನ್ನು ಗಾಜಿಗೆ ಸುರಿದು, ಒಡೆದ ಸೋಡಾವನ್ನು ಸೇರಿಸಿ, ಸೂಳೆಯ ಕೈಗಿಡುವನು ಸೂಳೆಯು ಅದನ್ನು sipಪ್ಪುತ್ತಾ) ನನ್‌ಪಾಡ್ನ ಈಗ್ಲೋ,ಆಗ್ಲೋ ಹೂತ್ಕೊಂಡ್ಹೋಗೊ ಘಟಾಂತ ನಿರ್ಧರಿಸ್ಬಿಟ್ಟು ನಾನ್ ಸತ್ಮೇಲೆ ನೀನ್ ಬದ್ಕೋ ನಿನ್ ಚಿಂತೆ ಅಲ್ಲ್ವೇಮ್ಮಾ ಹತ್ತಿರೋದು ನಿನ್ ತಲೇಗೆ? ಅಲ್ಲ್ವೇ ಅಮ್ಮಾ? ಹೊತ್ತು ಹೆತ್ತ ತಾಯಿಗೆ ಮೊದಲ್‌ಚಿಂತೇ

ಮೊದಲು ಗೋಳೂ "ಮಗಳು ನಾಯ್ತಾಳಲ್ಲಾ!" ಅಂಬೋದು ಸಹಜ ಸಂಸಾರ್ದಲ್ಲಿ "ಮಗಳು ಮಣ್ಣಾದ್ರೇನೂ? ನನ್ ಮುಂದಿನ್ ಬದ್ಕು ಗಿಟ್ಟಿಸ್ಕೋಬೇಕು!" ಅಂಬೋ ನಿಶ್ಚಿಂತೆ ನಿನಗಿರೋದು, ನಿನ್ನ್ದೇ ತಪ್ಪಲ್ಲ, ಅಮ್ಮ!?

ನಿನ್ನ ಸೂಳ್ಗಾರ್ಕೇಲಿ ನನ್ನ ಹೊತ್ತು ಹೆತ್ತ ಸೂಳ್ಗಾರ್ಕೆಯ ಪ್ರಭಾವ!

ಸುಬ್ಬು ಕ್ಷಮ್ಸು ಚಿನ್ನಾ! (ಬಾಹುವನ್ನು ಮುದುಕಿಯ ಕಡೆಗೆ ಸೂಚಿಸುತ್ತಾ) ಈ ಮುದಿಗೊಡ್ಡ್‌ಗಳು ಪಾಪ! ಹೊತ್ತ್ಹುಟ್ಟಿ, ಹೆತ್ತ್ಹುಟ್ಟಿ, ತೊದಲ್ತಾವೇ ಯಥಾ ಸಂಪ್ರದಾಯ!

ಸೂಳೆ (ಗಾಜಿನ ದ್ರಾವಕವನ್ನು ಒಂದೇ ಗುಟುಕಿನಲ್ಲಿ ನುಂಗಿ, ಗಾಜನ್ನು ನೆಲಕ್ಕೆ ಬಡಿದು, ಥಟ್ಟನೆದ್ದು ಕೂತು ಉನ್ಮಾದಾಗ್ರಹದಿಂದ) "ಹೊತ್ತ್ಹುಟ್ಟಿ?" "ಹೆತ್ತ್ಹುಟ್ಟಿ?" ತೊದ್ಲೊ!

(ಸುಬ್ಬುವಿನ ಕೈಯನ್ನು ಹಿಡಿದು) ಹಯ್ಯೋ, ಸುಬ್ಬೋ! ನನ್ನ "ಚಿನ್ನಾ" ಅಂದ್ಯಲ್ಲಾ! ದೊಡ್ಡ್ ಕುಲ್ದಲ್ ಹುಟ್ಟಿ, ದೊಡ್ಡ್ ಪದ್ವೀನ ಅನುಭವಿಸ್ತಿದ್ದ ನೀನು—ನನ್ನ ಮಾತ್ಗೆ ಮಳ್ಳಾಗಿ, ನನ್ನ್ ಮೇಲಿನ ಹುಚ್ನಲ್ಲಿ ಮನೆ, ಮನೆತನ, ಕುಲ, ಗೋತ್ರಾನೂ ಒಗ್ದ್‌ಸ್ದು, ಆಗ್ನಿಂದ ಇದ್‌ವರ್ಗೆ ಈ ಮೂವತ್ತ್ ವರ್ಷಾನೂ, ನನ್ನೀ ಅಂತ್ಯಾವಸ್ಥೇಲೂ ಶಿಶ್ರೂಷೆ ಮಾಡ್ತಿಧೀಯಲ್ಲಾ! . **ನೀನು** ಚಿನ್ನಾ! . **ನಾನಲ್ಲ!** ಹೊತ್ತವರ್ಗೂ, ಹೆತ್ತವರ್ಗೂ ಇರ್ಬೇಕಾದ ಮಮ್ತೆ **ನಿನ್ನಿದೆ!**

ನನ್ನ ಹೊತ್ತು, ಹೆತ್ತ ಈ ಕಿರಾತ್ಗಿಗೇಗಿಲ್ಲ! ಇವಳು ಹೊತ್ತದ್ದೇಕೆ? ಹೆತ್ತದ್ದೇಕೆ? ತಾಯ್ಗಾರ್ಕೆ ಮೇಲಾಶೇಪಟ್ಟೇ?
....ಎಂದ್ಗೂ ಇಲ್ಲಾ! ತನ್ನ್ ಹೊಟ್ಟೇಪಾಡ್ಗೆ! ನನ್ನ್ ಹೆತ್ತದ್ದೂ, ಬೆಳ್ಸಿದ್ದೂ, ಸೂಳ್ಗಾರ್ಕೇಲಿ ಮುಂದಕ್ ತಂದಿದ್ದೂ
. ..ಅವಳ ಹೊಟ್ಟೇ ಪಾಡ್ಗೆ! ನನ್ನ ಮೈ, ಮುಖ ನೋಡಿ, ಮನೇ ಮತ್ತೋರು, ದುಡ್ಡ್ ಅವಳ್ ಕಿಸೇಗೆ ಸುರ್ದು, ನನ್ನ್ ಮೈ ಮನಸ್ಸು, ಹೃದಯಾ, ಆತ್ಮಾನ್ನಾ ಹೊಲಸ್‌ಮಾಡ್ತಿದ್ದಾಗ ಇವಳು ನಸ್‌ನಗ್ತಾ ಇದ್ದಿದ್ದೂ ತನ್ನ್ ಹೊಟ್ಟೇ ತುಂಬೋಕೆ! ಈಗ ಅವಳವಸ್ಥೇ ಪಡ್‌ತಿರೋದೂ .ನಾನು ಸಾಯ್ತೀನೆ ಅಂಬೋದಕ್ಕಲ್ಲ ತನ್ನ್ ಹೊಟ್ಟೆಪಾಡು ತಪ್ಪ್ತೋ ಭಯದ ಮೇಲೆ! ಅರ್ಥ್ವಾ? ಸತ್ತು ನಾನ್ ಬಿಟ್ಟ್‌ಟ್ಟ್ ಹೋಗೋದುಡ್ನಾ, ದಕ್ಕಿಸ್ಕೊಂಡು, ತನ್ನ ಬದುಕ್ನ ಗಿಟ್ಟಿಸ್ಕೊಳ್ಳೋಕೆ!! (ಕೆಲವು ನಿಮಿಷಗಳ ಕಾಲ ಕೆಮ್ಮುವಳು) ಡ್ರಿಂಕೋ! ಮಂಕು? (ಸುಬ್ಬುವು ಯಥಾಪೂರ್ವಂ, ಮತ್ತೊಂದು ಗಾಜನ್ನು ತಯಾರ್‌ಮಾಡಿ ನೀಡಲು, ಸೂಳೆಯು ಅದನ್ನು ಒಂದೇ ಗುಟುಕಾಗಿ ನುಂಗಲು, ಕೈಯಿಂದ ಖಾಲೀ ಗಾಜನ್ನು ತೆಗೆದುಕೊಳ್ಳುವನು) ತಪ್ಪೇನೂ ಇಲ್ಲ! ಯಾರ್ ಸತ್ರೆ ತಾನೇ ಏನು? ಉಳ್ಕೋರ್ಗೆ ಯೋಚ್ನೆ ಇದ್ದೇ ಇರುತ್ತೆ! ಆದ್ರೆ ನನ್ಗಿರೋ ಆಶ್ಚರ್ಯ, ಹೆಂಗ್ಸು ತನ್ನ್ ಹೊಟ್ಟೇಲ್ಹುಟ್ಟ ಹದಿನಾಲ್ಕು ವರ್ಷವಾದ್ರೂ, ಒಂದ್ ಕಲ್ಮಷಾನೂ ಕಾಣ್ದೆ ಇದ್ದ ತನ್ನ್ ಮಗೂನ ತನ್ನ ಹಾಳ್ ಹೊಟ್ಟೇಪಾಡ್ಗೋಸ್ಕ್ರ ಈ ಸಮಾಜ್ದ ಮಾಂಸದ ಕೊಬ್ಬಿನ ಹಸ್ವಿಗ್ ತುತ್ತಾಗ್ ಕೊಟ್ಟು, "ಈ ಅವಸ್ಥೇಗ್ ನನ್ನ್ ಮಗಳ್ನ ತಂದಿಟ್ನಲ್ಲಾ!"ಂತ ಒಂದ್ ಕ್ಷಣವಾದ್ರೂ ತೋಚತ್ತ್ಯೇ? .ಈ ಈ ಪಿಶಾಚಿಗೇಂತ!? (ಉನ್ಮಾದದಿಂದ ನಗುವಳು) ಹಯ್ಯೋ ಹೋಗಮ್ಮಾ! ಯಾರ್ಹತ್ರ ಈ ಬೂಟಾಟ್ಕೆ! . ಹೆದರ್ಬೇಡ! ... ಸಾಯ್ತೀನೆ ಹೌದು! .. ..ಆದ್ರೆ ಸಧ್ಯಾ, ಪುಟ್ಟಾನ ಬಿಟ್ಟ್ ಹೋಗೋವಗೂರ್ ನಿನ್ ಬದುಕಿಗೇನೂ ಬೇನೇ ಇಲ್ಲಾ!...

ಇನ್ನಿಲ್ಲೇ ಇದ್ದು ರೇಗಿಸ್ಬೇಡ ! ಹೊತ್ತಾಯ್ತು ! ನನ್ ನೋಡ್ಕೊಳ್ಳೋಕ್ ಸುಬ್ಬು ಇಧಾನೆ ! ಒಳ್ಗ್ ಹೋಗಿ ಮುದುಕೊರ್ಳೋ ! ಪುಟ್ಟಾ ಓದಿದ್ ಸಾಕೂ ! ದೀಸದ್ ಬೆಳ್ಕು ಕಣ್ಗೊಳ್ಳೇದಲ್ಲಾ !, ಅವಳ ಓದ್ನ ನಿಲ್ಲಿಸಿ, ಕಳಿಸಿಲ್ಲಾಗ ! ... (ಸೂಳೆಯು ತಾಯಿಯು ನಿಷ್ಕ್ರಮಣ) ಡ್ರಿಂಕೂ, ಸುಬ್ಬೂ ! (ಸುಬ್ಬುವು ಯಥಾಪ್ರಕಾರ ಉಪಚರಿಸುವನು)

[Enter ಪುಟ್ಟಿ fourteen of age, a fascinating picture of our "up-to-date" school going Karnataka girl, side parted hair, "ಸೆರಗು" caught up by jewelled brooch, be-ribboned plait, Watch bearing wrist, and so forth]

**ಪುಟ್ಟಾ** (ತಾಯಿ ಇಪ್ಪಲ್ಲಿಗೆ ಓಡಿಬರುತ್ತಾ) ಅಮ್ಮಾ ! ನಮ್ಮಮ್ಮಾ ! ಎದ್ದಿದ್ದೀಯಾ ? . ಯಾಕ್ ನಿದ್ದ ಬರ್ಲಿಲ್ವೇ ? (ತಾಯಿಯನ್ನು ತಪ್ಪಿಕೊಂಡು, ತಲೆಯನ್ನು ಸವರುತ್ತಾ, ಮುಖವನ್ನು, "ಅಮ್ಮ! ನಮ್ಮಮ್ಮ!" 'ನಮ್ಮಮ್ಮ' ಎಂದು ಉಸುರುತ್ತಾ, ಮುದ್ದಿಡುತ್ತಾ) ಅಚ್ಚೀ, ನಿನಗ್ ನಿದ್ದೇಂದ್ರು ನನಗ್ ನಿದ್ದ ಇಲ್ಲ ಓದ್ತಿದ್ದೆ. ನಾಳೆ examinationಉ ನಿನ್ ದನಿ ಕೇಳಿಸ್ತು ! ಓಡ್ಬಂದೆ ! ನಮ್ಮಮ್ಮಾ ! (ಮುದ್ದಿಟ್ಟು) ಯಾಕಮ್ಮಾ ನಿದ್ದೆ ಇಲ್ಲ ಇನ್ನೂ ? ಯಾಕ್ ಸುಬ್ಬೂ ? (to Subbu) ಸುಬ್ಬೂ ! ಡಾಕ್ಟ್ರು, "ಅಮ್ಮನ್ಗ್ ಔಷ್ಧ ಕೊಟ್ಹೋಗಿದ್ದೇನ ಎಲ್ಲಾ ಸರ್ಹೋಗತ್ತೆ" ಅಂತಂದ್ ಹೋದ್ರಲ್ಲಾ ! ಕೊಟ್ಯಾ ? . ಕೇಳೋದೇನು ! ಕೊಟ್ಬೇ ಇರ್ತೀಯಾ ! .(ಸುಬ್ಬುವಿನ ಕೈಯನ್ನು ಸವರುತ್ತಾ) ನಮ್ಮ ಸುಬ್ಬೂವಮ್ಮಾ ! .ಹೌದೂ ? (ಸುಬ್ಬುವನ್ನು ಕುರಿತು) ನಿನಗ್ಯಾಕ್ ಊಟ ಇಲ್ಲಾ ?

ಸುಬ್ಬು ಇದೇನ್ ಪುಟ್ಟಾ ? ನನ್ ಕೇಳ್ತೀಯಲ್ಲಾ ! ನಿನ್ ತಟ್ಟೆ ಮಧ್ಯಾಹ್ನದಿಂದ ಇಲ್ಲೇ ಇದೆ ?

ಪುಟ್ಟಾ (ಸೂಳೆಯನ್ನು ಮುದ್ದಿಡುತ್ತಾ) ನನ್ಗೇನೋ ಅಮ್ಮ, ನೀನ್ ಬಿದ್ಕೊಂಡಾಗ್ಲಿಂದ.. ಹಸ್ವೇ ಇಲ್ಲ ನಿನ್ಗೂ ಹಾಗೇನೇ ಸುಬ್ಬು ? ಆದ್ರೆ ಅಜ್ಜಿ ಮಾತ್ರ !!

ಸೂಳೆ (ಫಕ್ಕನೆ ನಕ್ಕು) ನೋಡಿದ್ಯಾ ಸುಬ್ಬೂ .ಚೋಟುದ್ದ ಕೂಡ ಇಲ್ದ ಮಕ್ಳು ಎಷ್ಟು ಗಮನಿಸ್ತಾರೇಂಬೋದ್ನ ! ನಾನ್ಹೀಗೆ ಬಿದ್ಕೊಂಡಿರೋದು, ನಿಮ್ಮಿಬ್ಬರ್ದೆ ಹೊಟ್ಟೆ ತೊಳ್ಸಿ ಹಸ್ವಿಲ್ಲದ್ಹಾಗ್ ಮಾಡಿದರೂ, ನನ್ನತ್ರ ಆ ಭೂತ ಮಟ್ಗೆ ಘಂಟೆ ತಪ್ಪದ್ಹಾಗೆ ಗದುಕ್ತಿರೋದ್ನ ಗಮನಿಸದ್ಹಾಳೆ ನೋಡು ?... (ಪುಟ್ಟಾನ ತಲೆಯನ್ನು ಸವರುತ್ತಾ) ಏನು ಓದ್ತಿದ್ದೆ ಕಂದಾ ... ನಾವಲ್ಲೇ ? ಬೇಡ ಕಂದ .ನಾಳೆ examinationಉ ! ....(ಗಲ್ಲವನ್ನು ಮುಟ್ಟಿ) ಕೋಪವೇ ?

ಪುಟ್ಟಾ (ನಗುತ್ತಾ) ಹಯ್ಯೋ ! ನಾವಲ್ ಅಲ್ಲಾಮ್ಮಾ ... textoo Sanskrit textoo !!

ಸೂಳೆ ಸಂಸ್ಕೃತಾನೇ ? ಏನದು Textoo !

ಪುಟ್ಟಾ ಬುದ್ಧ ಜನ್ಮಾ ಅಮ್ಮ .ಅದ್ರಲ್ಲಿ ಒಂದ್ partoo !

ಸೂಳೆ ಯಾವುದಾದ್ರೂ ಒಂದ್ ಶ್ಲೋಕ ಹೇಳು ನೋಡೋಣ !

ಪುಟ್ಟಾ (ರಾಗವಾಗಿ) ಜಾಗರ್ತಿ ಸಂಸಾರಗೃಹೇ ಮನೀಷೀ ।
ಮೋಹಾನ್ಧಕಾರೇ ಸ್ವಪತಿ ಪ್ರಮತ್ತಃ ॥
ಪ್ರಜಾಗರೋ ಜೀವಿತಯೇವ ಸುಪ್ತಃ ।
ಮೃತಸ್ಯ ಸುಪ್ತಸ್ಯಚ ಕೋ ವಿಶೇಷಃ ॥

ಸೂಳೆ ಏನರ್ಥಾ, ಕಂದಾ ?

ಪುಟ್ಟಾ "ಜಾಗರ್ತಿ ಸಂಸಾರ ಗೃಹೇ ಮನೀಷೀ" ಅಂದ್ರೆ ಸಂಸಾರ್ದಲ್ಲಿ ಜಾಗರ್ಣೆ ಮಾಡ್ತಾನೆ ಮನುಷ್ಯ ! ಅಂದ್ರೆ, ಈ ಸಂಸಾರಾನಾ ನಂಬಬಾರ್ದು ಅಂತ ಕಣ್ಬಿಟ್ಕೊಂಡಿರ್ತಾನೆ, ತಿಳ್ದೋನು । "ಮೋಹಾನ್ಧಕಾರೇ ಸ್ವಪತಿ ಪ್ರಮತ್ತಃ" ಅಂದ್ರೆ ಪ್ರಮತ್ತ ಮನಸ್ಸು ವೈನ ಮದದಿಂದ ಕೊಬ್ಬಿರೋ ಮಂಕು ಸಂಸಾರಾಂಬೋದು ಕನಸು, ಮೋಹ, ಮಾಯೆ ಅಂತ ತಿಳೀದೆ ಈ ಕತ್ಲೇಲಿ ಗೊರ್ಕೆ ಹೊಡೀತಿರ್ತಾನೆ ! "ಪ್ರಜಾಗರೋ ಜೀವಿತ ಏವ ಸುಪ್ತಃ" ಅಂದ್ರೆ ಕಣ್ಬಿಟ್ಕೊಂಡಿರೋದು ಬಿಟ್ಕೊಂಡ ಹಾಗೇ ಮಲಗಿದ್ದಾರೆ । ಆದ್ದರಿಂದ ಸಂಸಾರದ ಕಣ್ಣಿಗೆ ಕಣ್ಣುಬಿಟ್ಟಿರೋ ಈ ಮಂಕು, ಬದುಕಿರೋವಾಗ್ಲೇ ನಿದ್ದೆ ಮಾಡ್ತಿಧಾನೇಂತ । "ಮೃತಸ್ಯ ಸುಪ್ತಸ್ಯ ಚ ಕೋ ವಿಶೇಷಃ" ಅಂದ್ರೆ ಸತ್ತಪನೂ, ನಿದ್ದೇ ಮಾಡೋನೂ ಇಬ್ಬರೂ ಒಂದೇ ! ಹೀಗೆ "ಬದುಕಿಯೂ ಕುರುಡನ ಹಾಗೆ ಗೊರ್ಕೆ ಹೊಡ್ಯೋವನ್ಗೂ, ಸತ್ತವನ್ಗೂ, ವ್ಯತ್ಯಾಸವೇನೂ"ಂತ ಅರ್ಥ । ಅಲ್ವೇ ಸುಬ್ಬೂ !

ಸೂಳೆ ಇದು ನಿನ್ನರ್ಥ್ವೇ ? ಪುಟ್ಟಾ !

ಪುಟ್ಟಾ ದೇವ್ರೇ ಗತೀ ! ನನಗೆಲ್ಲಿ ಸಂಸ್ಕೃತ ಗೊತ್ತು ! ಈ ಅರ್ಥ ನೋಟ್ಸ್‌ನಲ್ಲಿ ಇರೋ translationಉ . . ... .plus (ಸುಬ್ಬುವಿನ ಕೆನ್ನೆಗೆ ಒಂದೇಟು ಬಿಗಿಯುತ್ತಾ) ಸುಬ್ಬೂ . . .. ವ್ಯಾಖ್ಯಾನಾ ಅಮ್ಮಾ ! ನಾನು ಸಂಸ್ಕೃತದಲ್ಲಿ first class ಬರ್ಬೇಕೂಂತ ಆಶೆ ಅವನ್ಗೆ !

ಸೂಳೆ ನೋಡ್ದ್ಯಾ ಸುಬ್ಬೂ ? ಈ ಹಾಳು ಶ್ಲೋಕಾನ ಬರ್ದದ್ದು ಬುದ್ಧ !,..... ..ವಿಷ್ಣೂ ಅವತಾರ!, ... ..ಲೋಕ ಸಂರಕ್ಷಣೇಗೆ! ........"ಸಂಸಾರ ಗೃಹೇ.... ೫"........ನೀನ್ ಬೊಗ್ಳೋ ?

ಸುಬ್ಬು "ಜಾಗರ್ತಿ ಸಂಸಾರಗೃಹೇ ಮನೀಷೀ !"

ಸೂಳೆ ಸಮಾಜ್ದಲ್ಲಿ ಸಹಜವಾಗಿ ಇದ್ದು ಇರ್ಲೇ ಬೇಕಾದ ಸಂಸಾರಗಳಿಗೆ ನೀತಿ ಉಪದೇಶಿಸ್ತಾನಲ್ಲಾ ಬುದ್ಧಾ !?! ಸಮಾಜ್ದಲ್ಲಿ, ಸಂಸಾರ್ದ ಸುಖದುಃಖ ಸುಳಿವೇ ಸಲ್ಲದ ಸೂಳೇರ್ಗತಿ ಈ ಲೋಕೋದ್ಧಾರಕನ ಗೋಚರಕ್ಕೆ ಬರ್ಲಿಲ್ವಲ್ಲಾ !! ! (ಕಣ್ಣಿನಲ್ಲಿ ನೀರು ಸುರಿಸುತ್ತಾ) ಹೀಗೇ ನೋಡು .. ಪರಮಾತ್ಮನ ಅವತಾರಗಳೆಲ್ಲಾ ಪುಟ್ಟಾ ಹೇಳೋ ಪ್ರಮತ್ತರಿಗೆ ! ಸಂಸಾರ್ದ ಪ್ರಮತ್ತರಿಗೆ ! ನನ್ನಂಥ ಪಾಪಿಗಳಿಗಲ್ಲ ! ಡ್ರಿಂಕೋ ಸುಬ್ಬೂ ! (ಸುಬ್ಬುವು ಯಥಾಪೂರ್ವಂ ಸತ್ಕರಿಸುವನು )

ಸುಬ್ಬು ಚಿಂತೆ ಹಚ್ಕೋ ಬಾರ್ದೂಂದ್ರು ಡಾಕ್ಟ್ರು ! . .ಪುಟ್ಟಾ ! ಅಜ್ಜೀ ಮಲಕ್ಕೊಂಡ್ಬೋ ಏನೋ ! ಕಾಸಿದ್ಹಾಲಿಟ್ಟಿಧೆ, ಒಲೇ ಮೇಲೆ ! . ಅಮ್ಮನಿಗೆ !

ಪುಟ್ಟಾ (ತಾಯಿ ಮಲಗಿದ್ದ ಮಂಚವನ್ನು ಬಿಟ್ಟಿದ್ದು) ತಂದ್ ಬಿಟ್ಟೇಮ್ಮಾ ! ಒಂದ್ ನಿಮಿಷ ! (ಓಡುತ್ತಾ ನಿಷ್ಕ್ರಮಿಸುವಳು)

ಸೂಳೆ ಸುಬ್ಬು ! ಹತ್ತಿರ ಬಾ (ಸುಬ್ಬುವು ಹತ್ತಿರಕ್ಕೆ ಬರಲು, ಅವನ ಕಿವಿಯಲ್ಲಿ) ನಿನಗೇನ್ ಹೇಳಿದ್ರು ಸುಬ್ಬೂ, ಡಾಕ್ಟ್ರು ! "ಮನಸ್ಸಿಗೆ ಚಿಂತೆ ಹಚ್ಕೋಬಾರ್ದೂ"ಂತ್ಲೇ ? ...ನನಗ್ಹೇಳಿದ್ದಿಷ್ಟು ಕೂತ್ಕೋ ! (ಮಂಚದ ಮೇಲೆ ಕುಳಿತ ಸುಬ್ಬುವಿನ ಕೈಯನ್ನು ಸವರುತ್ತಾ) ಕೇಳ್ ಸುಬ್ಬೂ ! "ಇನ್ನ್ನೀನ್ ಬದ್ಕೋದಿಲ್ಲ .ಒಂದ್‌ವಾರ ದಾಟೋದು ಅಸಾಧ್ಯ" ಅಂದ್ರು, ಡಾಕ್ಟ್ರು ! ನಾನ್ ಹೋದ್ಮೇಲೆ, "ಮಿಕ್ಕೋವ್ರ ಗತಿ. .. ಏನೂಂ"ಬೋದ್ನ ಖಾಯಿಲೆಯಾಗಿ ಬಿದ್ಕೊಂಡಾಗ್ನಿಂದ್ಲೇ ಚಿಂತಿಸ್ತಾ ...ನೆನ್ನೆ ತಾನೇ ಎಲ್ಲಾ arrange ಮಾಡಿದ್ದೇನೆ !. . . ಕೇಳು !, .....ಹತ್ರ ಬಾರೋ !.. ....ಆ ಮುದ್ಕಿ ಹೊಂಚ್ಕೇಳ್ತಾಳು !........ನನ್ಗಿರೋ

ದುಡ್ಡು ಮೂವತ್ತು ಸಾವಿರ ರುಪಾಯಿ, ಬ್ಯಾಂಕ್ನಲ್ಲಿ Fixedಉ! ಅದ್ನೂ ನನ್ನೊಡವೆಗಳ್ನೂ, ಈ ಮನೇಸಹಿತ ನಿನ್ನ್ ಹೆಸರಿಗೆ ಬರ್ದಿಟ್ಟಿದ್ದೇನೆ ಬೆಚ್ಚ್ಬೀಳ್ಬೇಡ ನೀನ್ ತಂದು, ನಾನ್ ತಿಂದು, ಕೊಬ್ಬಿದ್ದ್ರಲ್ಲಿ, ಎರಚಿದ್ದ್ರಲ್ಲಿ, ಕಾಲ್ಪಾಲೂ ಕೂಡ ಅಲ್ಲ!, ...ಇದೆಲ್ಲಾ! ಈ ಮನೆ ಕಟ್ಕೊಂಡ್ ನಿನ್ಗೇನೂ ಪ್ರಯೋಜ್ನ ಇಲ್ಲ! ಹನ್ನೆರಡ್ ಸಾವ್ರ ರುಪಾಯ್ಗೆ ಈ ಮನೇ ಮಾರೋ ಏರ್ಪಾಟ್ ಮಾಡ್ಬಿಟ್ಟಿದೇನೆ ಈ ದುಡ್ಡ್ನೂ, ಒಡವೆ ಗಳ್ನೂ, ಬ್ಯಾಂಕ್ನಲ್ಲಿರೋ ದುಡ್ನೂ, ಬೀಳಕವಾಡಿ ಕೊಳ್ಳೆಗಾಲ್ದ ಜಮೀನ್ನೂ, ಜೋಪಾನ ಮಾಡ್ಕೊಂಡು, ತಿರುಗ್ಹೋಗಿ ನಿನ್ನ್ ಕುಟುಂಬಾನ್ ಸೇರ್ಕೋ!

**ಸುಬ್ಬು** ಚೆನ್ನಾಗ್ಹೇಳ್ದೆ ಚಿನ್ನ! .ನೀನೊಂದ್ಸೇಳ್ .. ಮಾತಿಗ್ ಹೇಳ್ತೀನೇ ನನ್ನೂ ಪುಟ್ಟಾನೂ ಬಿಟ್ಟು ದೇವರ್ ಪಾದಾನ ಸೇರೋ ಪಕ್ಷಕ್ಕೆ, ನೀನ್ ಬಿಟ್ಹೋಗೋ ಒಡವೆ ವಸ್ತುಗಳ್ನ, ನಿನ್ನೂ ಕಳ್ಕೊಂಡು ಹುಚ್ಚ್ನು ಹಿಡ್ದು, ಒದ್ದಾಡ್ತಾ ತಿರುಗೋ ನನ್ಗೆ, ದುಡ್ಡೇನು? .ಒಡವೆಯೇನು? ಪುಟ್ಟಾನ ಉಪ್ಯೋಗಕ್ಕೆ ಇಡು! ಚೈತನ್ಯವಿರೋವಾಗ್ಲೇ ಇನ್ನೊಂದು ವಿಲ್‌ನ ಬರಿ!... . ಈಗ್ಲೇ!!

**ಸೂರಿ** ಹಯ್ಯೋ! ಮಂಕೂ! ಸಾಯ್ತಿರೋಳ್ ಹೇಳ್ತಾಳೇಂತ ಕಿವಿಕೊಟ್ಟು ಕೇಳೋ!' ಇಷ್ಟ್ ವರ್ಷ, ನೀನೂ ಬಿಟ್ಟ್‌ಬಿಟ್ಟು ಪೇಚಾಡ್ತಿರೋ ನಿನ್ ಕುಟುಂಬಾನ ತಿರಿಗ್ಸೇರೋದು ನಿನ್ನ ಮೊದಲ್ ಕರ್ತವ್ಯ! . ಪುಟ್ಟಾನ, ಅವಳ ನಡ್ತೆ, ಗುಣದ ಪ್ರಕಾರ ಒಳ್ಳೇ ದಾರಿಗೆ ತರೋದು ನಿನ್ನ್ ಆಮೇಲಿನ ಭಾರ! ಇದಕ್ಕೆ ಎಷ್ಟರಮಟ್ಟಿಗೊಡಂಬಡ್ತಾಳೋ ಅವ್ರಜ್ಜಿ, ಅಷ್ಟರ ಮಟ್ಟಿಗೇನೇ ಆ ಮುದ್ಕೀಗೆ ಸಹಾಯ ಮಾಡೋದು ನಿನ್ನ್ ಮೂರ್ನೇ ಡ್ಯೂಟಿ! . ಆದ್ರೆ ನಾನ್ ಸಾಯುತ್ಲೂನೂವೇ ಮೊದ್ಲ —ನನ್ನ್ ಲಾಯರ್ ಹತ್ರ ಇಧೇ ನನ್ನ 'ವಿಲ್ಲು' ......ದುಡ್ಡು,

ಒಡವೆ, ಈ ಮನೆಯ title deedsಉ **ನೀನೇ sole** .... **ಎಂಥಾದ್ದೋ ಅದು** ? ಇವೆಲ್ಲಾನೂ ಭದ್ರ ಪಡಿಸ್ಕೊಂಡು, ನಿಮ್ಮನೇಗೆ ಹೋಗ್ಸೇರು—ಮನೇ—ಸ್ವತ್ತು. ಇಟ್ಕೊಂಡು ಪುನಃ ಮನೆ ಬಂದು ಸೇರಿದ್ರೆ ಅಡ್ಡಿಮಾಡೋದಿಲ್ಲ ನಿಮ್ಮ ಜನಗ್ಳು !!

.ಪುಟ್ಟಾನ ಓದ್ಗಾರ್ಕೇಲೇ ಹಾಕು ! ಎಷ್ಟು ಓದಿದ್ರೆ ತಾನೇ ಏನು ! ಸೂಳೇಗ್ ಹುಟ್ಟಿದ್ ಮಗೂನ ಸಮಾಜ ಸಹಿಸೋದಿಲ್ಲಾ ! ಮದ್ವೆ, ಮನೆ, ಮಕ್ಳು ಅವಳ ಪಾಲಿಗಿಲ್ಲದ ಪಾಪಾ ಪುಟ್ಟಾನ್ ತಪ್ಪೋ ?, ನನ್ನೀ ದಾರೀಗ್ ತಂದ, ನಮ್ಮಮ್ಮನ್ ತಪ್ಪೋ ? ಇಲ್ಲಾ ಆ ಬುದ್ಧನೇ ಸಂರಕ್ಷಿಸೋ ಸಮಾಜದ ತಪ್ಪೋ ? ಇಲ್ಲಾ, ಧರ್ಮ ಸಂಸ್ಥಾಪನೇಗೇ ಅಂತ ಯುಗಯುಗಾನೂ ತಪ್ದೆ ಅವತರಿಸೋ ಸೃಷ್ಟಿಕರ್ತನ ತಪ್ಪೋ ?

ಒಟ್ನಲ್ಲಿ ಇಂಥಾವರ್ದೇ ತಪ್ಪೂಂತ ನಿರ್ಧರಿಸೋ, ನೀತಿ ನಿಪುಣರಿನ್ನೂ ಹುಟ್ಟಿಲ್ಲ ! ಜಗತ್ನಲ್ಲಿ !! ಸಧ್ಯ, ಅವಳ ಬೆಳವಣ್ಗೆ, ವಿದ್ಯೆ, ನಡತೇನ ಗಮನಿಸ್ತಾ ನಾಲ್ಕ್ ಜನಕ್ಕೆ ಉಪಯೋಗ ಆಗೋಹಾಗೆ, ಒಬ್ಬ ನರ್ಸ್ಸೋ, ಒಬ್ಬ ಟೀಚರ್ರೋ

ಇಲ್ಲ ಓದ್ಗಾರ್ಕೇಲಿ ಅವಳ್ ಬುದ್ಧಿ ಓಡಿದ್ರೆ ಒಬ್ಬ ಲೇಡಿ ಡಾಕ್ಟರ್ ಕಸಬಿಗೋ ಲಾಯಖ್ಖಾಗಿ ಮುಂದಕ್ ತರೋದು ನಿನ್ಭಾರಾ ! (ಕಣ್ಣೀರು ಸುರಿಸುತ್ತಾ, ಆಡುವುದಕ್ಕೆ ಪ್ರಯತ್ನಿಸಿದ ಮಾತುಗಳು ಹೊರಹೊರಡದೆ, ತಲೆಬಾಗುವ ಸುಬ್ಬುವಿನ ಮುಖವನ್ನು ಸವರುತ್ತಾ) ಹೋಗಿ ಮಲಕ್ಕೋ ಸುಬ್ಬು ! ಒಂದ್ ಮಟ್ಟಿಗೂ

....ಮರೀಬೇಡಾ ! ಈ ಸಂಸ್ಕೃತ ಇತ್ಯಾದಿಗ್ಳ ಗಲಾಟೇಲಿ . ನನಗೊಂದ್ಯೋಚ್ನೆ ಹೊಕ್ಕತ್ತೆ, ಸುಬ್ಬು ! ಕೇವಲ ಕಲ್ಕುಟಿಕ್ಕ ಕುಟ್ಟಿ ಕತ್ತಿದ ಕರೀಕಲ್ನಲ್ಲಿ ಭಕ್ತರ ಆಶೀ ಅಂಬೋದು ದೇವ್ರಾಗಿ ಆ ಕಲ್ನಲ್ಲಿ ಅವಿತ್ಕೊಂಡಿರೋಹಾಗೇ ಲೋಕ್ವೆಲ್ಲಾ ಎಷ್ಟು ಹೀಯಾಳಿಸಿದರೂ (ಎದೆಯನ್ನು ಬಿಗಿದ ದಕ್ಷಿಣ ಮುಷ್ಟಿಯಿಂದ, ಬಾರಿಬಾರಿಗೂ ನಾವು ವಕ್ಷವನ್ನು ಬಡಿಯುತ್ತಾ) ಈ ಮನುಷ್ಯ ದೇಹದಲ್ಲಿ ...ಈ ಕೊಳೆತ ಕಾಯದಲ್ಲೂ ನಿನ್ನ ಭಕ್ತೀ, ನಿನ್ನ

ಶಿಶ್ರೂಷೆಯಿಂದ, ಇಲ್ಲೆಲ್ಲೋ ಸುಬ್ಬೂ, ನಿನ್ನ್ ದೇವ್ರು, ಅಡಗ್ ಕೊಂಡಿದೆ! ಪ್ರಪಂಚದ ಪಾಪಿ ಪ್ರಯೋಜನಕ್ಕೆ ಹುಟ್ಟಿದ ನನಗೆ ಒಂದ್ ಹೆಮ್ಮೆ, ಸುಬ್ಬೂ! ನಿನ್ನ್ ಭಕ್ತಿ, ಪ್ರೇಮ, ಸುಬ್ಬೂ!, ಇನ್ನೆರಡು ದಿನಕ್ಕ್ ಭಯವಿಲ್ಲ .ನನ್ ಜೀವಕ್ಕೆ! . .ಇನ್ನ್ ನಾಳೆ ಬೇರೆ ಇಧೆ ಓಡಾಡೋದು!, ಡಾಕ್ಟರ್ ಮನೆಗೂ ಇಲ್ಲಿಗೂ!.. ಕೊನೇಗೊಂದು ಡ್ರಿಂಕ್ ಕೊಟ್ಬಿಟ್ಟು ಹೋಗ್ ಮಲಕ್ಕೋ, ಸುಬ್ಬೂ! ..ಪುಟ್ಟ್ಯಾ ತರ್‍ತಾಳೆ ಹಾಲು!

ಸುಬ್ಬು ಆಗ್ಲಿ ಚಿನ್ನ! ಆದ್ರೇ !?

ಸೂಳೆ (ಬಲಗೈಯಿಂದ ಕುತ್ತಿಗೆಯನ್ನು ಸೀವುತ್ತಾ) ಅಬ್ಬಾ! ಅನ್ಯಾಯ ಸುಬ್ಬೂ . ಈ ತಲೆನೋವು! strong ಮಾಡು drink!

ಸುಬ್ಬು (apprehensively) ಸಾಲ್ದೇ ತಕ್ಕೊಂಡದ್ದು? ಒಳ್ಳೇದೇ ಮೈಗೆ ಈಗ ?

ಸೂಳೆ ಈಗ್ಲೋ, ಆಗ್ಲೋ ಸತ್ತು ಸುಟ್ಟು ಬೂದಿಯಾಗೋ ಈ ಕೊಳೆತ ಮೈಗೆ, ಒಳ್ಳೇದೇನೂ, ಕೆಟ್ಟದ್ದೇನೂ . ಕೊಡು ಮಗು !!

[ಸುಬ್ಬುವು ಬ್ರಾಂಡಿ ಬಾಟಲಿಂದ ಗಾಜಿನ ದ್ರಾವಕವನ್ನು ಬಗ್ಗಿಸಿ, ಸೋಡಾವನ್ನು ಒಡೆದು, ಸೂಳೆಯ ಕೈಗೆ ಕೊಟ್ಟು, ಗಟ್ಟಿಯಾಗಿ 'ಪುಟ್ಟಾ' ಅನ್ನುನಿಗ್ಬಾಲು!" ಎನ್ನುತ್ತಾ—"ಎಡೂರವರೇಗೆ ಔಷಧ ಕೊಡ್ಬೇಕು" ಎಂದು ತನಗೆ ತಾನೇ ಹೇಳಿಕೊಳ್ಳುತ್ತ 'ಅಲಾರಂ ಕ್ಲಾಕ್' ಅನ್ನು set ಮಾಡಿ ನಿಷ್ಕ್ರಮಿಸುವನು. ಸೂಳೆಯು ಮಲಗಿದ್ದ ಹಾಗೆಯೇ ಅರ್ಧವನ್ನು ಕುಡಿದು, ಮಿಕ್ಕ ಅರ್ಧ ಬಾಕಿ ಇರುವ ಗಾಜನ್ನು ಎದೆಯ ಮೇಲೆ ಇರಿಸಿಕೊಂಡು "ಪುಟ್ಟ್ಯಾ, ಹಾಲಿಲ್ಲವೇ... ಮನೇಲಿ ?" ಎನ್ನುವಳು.]

ಹೆತ್ತದ್ದು ನನ್ನ! ಸೂಳ್ಯಾಗ್ಕರ್ೇಲೇನೇವೇಯೋ ಪುಟ್ಟಾ, ನಿನ್ನ ಹೆತ್ತದ್ದು ನಾನು!

**ಪುಟ್ಟಾ :** ಆದ್ರೆ ಅಮ್ಮಾ.. ಅಜ್ಜಿ ಹೇಳಿದ್ಲು! ನೀನ್ಸತ್ತೋಗಿ ಹೋಗ್ತೀಯಂತೇ ನಮ್ಮನ್ನೆಲ್ಲಾ ಬಿಟ್ಟ್‌ಬಿಟ್ಟು ..! "ಸುಳ್ಳು"ಂದ! "ಯೆಲ್ಲ್ ಹೋಗೋದು ?" "ಯಾವಾಗ ?" ಅಂತ ನಾನ್ ಕೇಳುತ್ಲು. ಬಾಯ್ ಬಿಗಿದ್ಲು! ನಾನು ಕೇಳೇ ಬಿಟ್ಟೆ! "ನನ್ನೂ ನಮ್ಮ್ಸುಬ್ಬುನ್ನೂವೇ ಬಿಟ್ಬಿಟ್ಟು . . .ಎಲ್ಲ್ ಹೋದಾಳು ನಮ್ಮಮ್ಮಾ!!" ಅಂತ ನನ್ನೂ, ಸುಬ್ಬುನ್ನೂ ಬಿಟ್ಬಿಟ್ಟು (ನಸುನಗುತ್ತಾ) ಹ್‌ಹ್ಹಾಹಾ!! ನೀನಂತೆ! ಓಡ್ಹೋಗೋದಂತೆ! ಅಜ್ಜೀಗಮ್ಮಾ, ಬರ್ತಾ, ಬರ್ತಾ ಬುದ್ಧಿ ಕೆಡ್ತಾ ಬರ್ತಿಧೆ! (ಫಕಫಕನೆ ನಗುವಳು) [ಪುಟ್ಟಾ ಸೂಳೆಯನ್ನು ಸಮೀಪಿಸಿದಾಗ ಎಲೆಕ್ಟ್ರಿಕ್ ದೀಪದ ಬೆಳಕು ಪುಟ್ಟಾನ ಮುಖವನ್ನು ಬೆಳಗುತ್ತಲೇ, ಸೂಳೆಯು ಪುಟ್ಟಾವಿನ ಮುಖವನ್ನು ಎರಡು ಕೈಯಲ್ಲೂ ಬಿಗಿದು, ಆದರಿಸುತ್ತಾ]

**ಸೂಳೆ :** ಆಶ್ಚರ್ಯ!! (ಬಿರುಸಾಗಿ) ಒದ್ದ್ ಎಬ್ಬಿಸ್ಕೊಂಡ್‌ಬಾ. ನಿಮ್ಮಜ್ಜೀನಾ!

**ಪುಟ್ಟಾ** [ಅಲ್ಪ ಬದರಿ] ಇದ್ಯಾಕಮ್ಮಾ? ಅಜ್ಜಿ? ಈಗ ?

**ಸೂಳೆ** [ಹಲ್ಲು ಕಡಿಯುತ್ತ ಕರೆದಿ] ಹೇಳಿದ್ದ್ ಕೇಳು! ಪುಟ್ಟಾ! ನಿಮ್ಮಜ್ಜೀನ ಎಬ್ಬಿಸ್ಕೊಂಡ್ ಬಾ! [ಪುಟ್ಟಾ ನಿಷ್ಕ್ರಮಿಸುತ್ತಿರಲು] ಒಂದ್ ಡ್ರಿಂಕ್ ಕೊಟ್ಬಿಟ್ಟ್ ಹೋಗು [ಪುಟ್ಟ...ಸುಬ್ಬುವಿನ ಸತ್ಕಾರವನ್ನು ಅನುಸರಿಸಿ, ಸಲ್ಲಿಸಿ, ನಿಷ್ಕ್ರಮಿಸಿ, ಎರಡು ನಿಮಿಷಗಳಲ್ಲಿ ಅಜ್ಜಿಯೊಡನೆ ಪುನಃ ಪ್ರವೇಶಿಸುವಳು.] ಅಮ್ಮಾ! ನನ್ನ್ ಹತ್ತು ಹೊತ್ತು ಈ ಸ್ಥಿತೀಗೆ ತಂದಿಟ್ಟೆ ನಮ್ಮಮ್ಮಾ! ಒಳ್ಳೇ ನಿದ್ದೇ ಅಲ್ವೇ ನಿಂಗೇ? ಸೂಳ್ಯಾಗ್ಕರ್ೇ ಕಸ್ಬೆಲ್ಲಾ ರಾತ್ರಿ ನಿದ್ದೆ ಕಡೋದು! ಈಗ ಈ ರಾತ್ರಿ,. ..ನಿನ್ನ್ ಮುಗ್ಳು

ಸಾಯ್ತಿರೋ ರಾತ್ರೀನೇ ನಿನ್ಗೆ ಕುಣ್ತ್ಕೊಂಬ ನಿದ್ದೆ! ಶಾಂತಿ! (laughs hysterically) ನಿನ್ನ್ ಎಬ್ಸಿದ್ದು ಯಾಕೇಂ ತೀಯಾ? ಇಲ್ಬಾ, ಪುಟ್ಟಾ! [ಪುಟ್ಟಾ obeys ಸೂಳೇ, turning ಪುಟ್ಟಾ's face to the full glare of the green-shaded electric lamp) ನೋಡ್ಬ್ರನ್ಮ.. ಈ ಮೂತಿ? ಜ್ಞಾಪಕ ಏನಾದ್ರೂ ಬರುತ್ತ್ಯೇ? ನನ್ಗೇ!?

**ಸೂಳೆ ತಾಯಿ** ಜ್ಞಾಪ್ಕ?! ಏನ್ನ್ ಜ್ಞಾಪ್ಕ!

**ಸೂಳೆ** ಕುಕ್ಕರಿಸ್ಕೊ, ಪುಟ್ಟಾ! ನಾನ್ ಹೇಳೋದು ಕೇಳ್ತೀಯಾ?

**ಪುಟ್ಟಾ** (ಫಕ್ಕನೆ ನಗುತ್ತಾ) ಯಾವಾಗನ್ಮ, ನೀನ್ ಹೇಳಿದ್ ಕೇಳ್ಲಿಲ್ಲ? ನಾನು? ನೀನ್ ಹೇಳೋದಾಗ್ಲೀ ನಮ್ಮ ಸುಬ್ಬು ಹೇಳೋದಾಗ್ಲೀ?

**ಸೂಳೆ** (crooningly) ಕೇಳು ಕಂದಾ ನನ್ನ ದೊಡ್ಡ್ ಡ್ರೆಸ್ಸಿಂಗ್ ಕೇಸ್ ಒಳ್ಗೆ ತಳಾಣದಲ್ಲಿ ಕಪ್ಪಂಕವ್ವು! ನೀರಾಜಿ! ಚಾಕ್ಲಿ ಕಿರಿಗೆ! ಹದಿನಾರೇ ಮೊಳ! ಅದ್ನ ನಿನ್ನೀ "up-to-date" ಬಟ್ಟೆಗಳ್ನೆಲ್ಲಾ ಕಿತ್ತೆಸ್ದು, ಆ ಕಿರಿಗೇನ್ ಸುತ್ಕೊಂಡು ನಿನ್ನೀ "ಸೈಡ್ ಪಾರ್ಟಿಂಗ್" ಬಿಟ್ಟು ಮುತ್ತೈದೇರ ಹಾಗೆ ನೆಟ್ಟ್ ಬೈತಲೆ ಬಾಚ್ಕೊಂಡು ಹಣೇಗೆ ದೊಡ್ಡದಾಗಿ ಕುಂಕ್ಮ ಹಚ್ಕೊಂಡು, ಬಾ ಕಂದ! ಹೋಗು.. ಡ್ರೆಸ್ಸಿಂಗ್ ಕೇಸು ನೊಸಳೆ ತೊಗಲು ಡ್ರೆಸ್ಸಿಂಗ್ ಕೇಸು ಆ ಮೂಲೇಲಿ! (ಪುಟ್ಟಾ exits)

**ಸೂಳೆ ತಾಯಿ** ಇದೇನು? ಹುಚ್ಚೇ? ಕುಡಿದದ್ ಭ್ರಮೇನೇ? ಸಾಯೋಕ್ ಮುಂಚೆ, ದೇವರನ್ನ್, ದಿಂಡರ್ನ ಬೇಡಿಕೊಳ್ಳೋದು ಉಂಟು. ಇಲ್ಲ ಸತ್ತ್ಮೇಲೆ ಬದ್ಕಿರೋರು .. ಮುಂದಕ್

ಬದ್ಕೋರು ಹ್ಯಾಗೇಂತ ಏರ್ಪಾಟ್ ಮಾಡೋದು ಉಂಟು! ನೀನೀಗಿರೋ ಗತೀಲಿ ಸ್ಥಿತೀಲಿ ನಿಮ್ಮಪ್ಪಮ್ಮ ನಾನೂಂ ಬೋದ್ನ ಮರೀಬೇಡಾ! ನೀನ್ ಸತ್ಮೇಲೆ ದೇವ್ರು ಕೇಳ್ತಾನೇ! "ನಿನ್ನ ಹೊಟ್ಟೆ ಪಟ್ಟೆ ಮುಂದಕ್ ತಂದ ಅಮ್ಮನ್ ಗತೀಗ ಏನ್ ಏರ್ಪಾಟ್ ಮಾಡ್ಕೊಟ್ಟು ಬಂದಿದ್ದೀಯಾ?" ಅಂತ. ದೇವರ್ ಕೇಳಿದ್ರೆ ಏನ್ಹೇಳ್ತೀಯಾ?

ಸೂಳೆ 'ಅಮ್ಮಾ! ನಿನ್ನ ಹೊಟ್ಟೇಲಿ ನಾನ್ ಹುಟ್ಟಿದ್ದು ನಿನ್ನ ತಪ್ಪೋ, ನನ್ನ ತಪ್ಪೋ ಇಲ್ಲಾ ನಾನಿನ್ನೂ ಅರಿಯದ, ನೀನೂ ಹೇಳದ ನಮ್ಮಪ್ಪನ್ ತಪ್ಪೋ! ಇಲ್ಲಾ ನಾಗರೀಕರು ನಂಬಿದ ಸಮಾಜದತ್ತಪ್ಪೋ? ಇನ್ನ ಅಮ್ಮಾ! ನಿರ್ಧರಿಸೋರ್ ಯಾರು? ನನ್ನರೇನು? ಸಾಯ್ತಿದ್ರೇನು? ಗತಿ, ಗತೀನೇ! ಸೂಳೆ, ಸೂಳೇನೇ! ಅಮ್ಮಾ, ನೀನ್ ಹೀಗಿರೋದು ನಾನ್ ಹೀಗ್ ಸಾಯ್ತಿರೋದು ನಿನ್ನ ತಪ್ಪೋ? ನನ್ನ ತಪ್ಪೋ? ಇಲ್ಲಾ ಸಮಾಜದ್ ತಪ್ಪೋ? ನಿನ್ನನನ್ನ ತಪ್ಪುಗಳ್ನ ನಿರ್ಧರಿಸಿ ನ್ಯಾಯ ತೀರ್ಸೋದು ದೇವ್ರಿರೋ ಸ್ವರ್ಗದಲ್ಲಲ್ಲಾ ಅಮ್ಮಾ! ಇದ್ನ ನಿರ್ಧರಿಸೋದು ನಾನ್ ಹೋಗೋ ನರಕದ ಆ ಯಮಧರ್ಮರಾಯ! ಯಮ ಯಮನಾದ್ರೂ ನೋನೇ, ಯಮ. ಧರ್ಮರಾಯ! "ಸತ್ಯಾನ್ನ ವರೋಧರ್ಮಃ", "ಅಹಿಂಸಾ ಪರಮೋಧರ್ಮಃ!" "ಸುಳ್ಳು ಹೇಳಬಾರದು ಪರರಿಗ!" 'ಹಿಂಸೇನು ತರ್ಬಾರ್ದು ಪರರ್ಗೆ'ಂತ ಇವೆರ್ಡನ್ನೂ ಹೊಂಪ್ನೋಕ ವರ್ಷಗಟ್ಲೆ ತಪಸ್ಮಾಡ್ತಿದ್ದಾನೆ ಆ ಮಹಾತ್ಮ, ಜೈಲಾಶ್ರಮದಲ್ಲಿ (points to a picture of Gandhi)! ತಪ್ಪ್ಯಾರದೂ? ಸೂಳ್ನೇರ್ನ ಗತೀರ್ನೂ ಸೃಷ್ಟಿಸಿದ ಬ್ರಹ್ಮಂದೇ? ಇಲ್ಲಾ ಗತಿ ಬೇರೆ ಸೂಳೆ ಬೇರೆ ಆದರೂ, "ಗತೀಗ್ಗಂಡ—ಸೂಳೇಗ್ ಮಿಂಡಾ"ಂತ ಭೇದ ಮಾಡ್ಕೊಂಡು ನಡೀತಿರೋ ಈ ಸಮಾಜದ್ದೇ? ಯಾರ್ದು ಈ ತಪ್ಪು? [ಪ್ರಟ್ಟಾ re enters, ಪ್ರಟ್ಟಾ ನಾವು ಪ್ರಸ್ತಾಪನೆ

bottle of half soda, and emptying the stale contents into her mother's glass, this while holding her - prussic acid—laden into milk filled glass in her left hand and then transferring it to her right)Cheerio, ಅಮ್ಮಾ! ..Chin! Chin! (ತಾನು ಹಿಡಿದಿರುವ ಗಾಜನ್ನು ತಾಯಿಯ ಕೈಲಿರುವ ಗಾಜಿಗೆ ತಾಕಿಸುತ್ತಾ) ಮತರ್ಾ್ಯವ್ಮಾ ?

ಸೂಳೆ, (ತಿರಿಗಿ ಬೆಚ್ಚಿ) "ಈ cheerio"ಗ್ಳು! ಈ chin chinಗ್ಳು ಈಗ್ಯಾಕೇ? ಪುಟ್ಟಾ?

ಪುಟ್ಟ ಯಾಕೇಮ್ಮಾ?. ಮತ್ರ್ಬಿಟ್ಟ್ಯಾಮ್ಮಾ? ನಮ್ಮಪ್ಪ ಹಳೇ ಸ್ನೇಹಿತ್ರ್ನು! ದೊಡ್ಡ್ ಮನುಷ್ಯನ್ನರ್ First ಉ ಆ ಚಿಕ್ಕ್ ದೊಡ್ಡ್ ಮನುಷ್ಯ! ಜ್ಞಾಪ್ಕ ಇಧ್ಯೇಮ್ಮಾ? ಅನ್ನ್ಯಾಯ ಗಲಾಟಿ ಆದ್ರೂ Gentlemanಊ! (pointing out to the ರವಿವರ್ಮ's "ವಾಮನ ಬಲಿ" picture, which the audience have seen before, in Act I) ಆ ಗೋಂಬೇನ್ ನೋಡಿ ಆತ ಹೇಳಿದ ಕಥೆ ಸುಬ್ಬು ನನಗ್ ಹೇಳಿದ ನಕ್ಕೂ, ನಕ್ಕೂ, ಹೊಟ್ಟೆ ಹುಣ್ಣಾಯ್ತು! ಆತ್ನೇ chin chin ಅಂತ ಗಾಜಿಗೆ ಗಾಜು ತಾಕಿಸಿ ಕುಡೀತಿದ್ದದ್ದು! ಮತರ್ಾ್ಯಮ್ಮಾ! ಇನ್ನೂ ಆ Cheerio ದೊಡ್ಡ ಮನುಷ್ಯ ಮುದುಕ! ನೀನ್ ಹೇಳ್ತಿದ್ದಾಗೆ 'ಬ್ಯೂಯಿಕ್ ಕಾರು' ಜ್ಞಾಪ್ಕೆವ? ಆತ ಬರೋ ವಾಗ್ಲೆಲ್ಲಾ ನಿನ್ನ ಈ ದ್ರಾವಕದ ಜೂತೇಲಿ ನನಗೆ ಒಂದು Raspberry ತಂದು, ತಾನೂ ನೀನೂ ಕುಡಿಯೋವಾಗೆಲ್ಲಾ "ಚ್ಚೀರ್ಯೋ" "ಚ್ಚೀರ್ಯೋ" ಅಂತಿದ್ದ ಆಗ ನನಗೆ 'ರಾ' ಬರ್ತಾ ಇರ್ಲಿಲ್ಲ "ಚ್ಚೀಡ್ಯೋ" "ಚ್ಚೀಡ್ಯೋ" ಅಂತಿದ್ದೆ! ಕೇಳ್ದ ಒಂದ್ದಿನ (Resuming her Childish droll) "ಏನ್ನಾರೆ .. 'ಚ್ಚೀಡ್ಯೋ' ಅಂದ್ರೆ?" ಅದಕ್ಕಾತ, "ಚ್ಚೀರ್ಯೋ! ಅಂತ ಹೇಳಿ ಬಿಟ್ಟು ಕುಡ್ದ್ರೆ ವಿಷಾನೂ ಅಮೃತ ಆಗುತ್ತೆ! ಮೈಗೆ ಏನೂ ಕೆಡುಕಿರೋದಿಲ್ಲ!" ಅಂತಂತಿದ್ರು Therefore, ಅಮ್ಮಾ' ನಾಳೆ

ನನಗೆ examinationಉ, ನಾನು ಬೆಳಿಗ್ಗೆ ಬೇಗ ಏಳ್ಬೇಕು! ಸುಬ್ಬು ಹೇಳ್ತಾನೆ ನಿನಗೂ ಡಾಕ್ಟ್ರು "ಪರ್ವಾಗಿಲ್ಲಾ"ಂದ್ರಂತೆ "ಚೀರ್ಯೋ" ಅವ್ಮಾ! (Raises the glass higher than her head about to drink)

ಸೂಳೆ [ಸೂಳೆ with horror in her eyes, springing up with difficulty is about to dash down (ಪುಟ್ಟಾ's) glass with hers, but, with all her will power evoked, suppresses the rising, lumps up from her breaking heart with set teeth grimly, raising her glass too with tears welling up in her eyes—(ಗದ್ಗದ ಸ್ವರದಿಂದ) ಚೀರ್ಯೋ ನನ್ನ ಕಂದಾ !!!

ಪುಟ್ಟಾ: (Turning her face to R ವೈಮುರೆತು ಸ್ವಲ್ಪ ಘಟ್ಟಿಯಾಗಿ) ಚೀರ್ಯೋ! ಸುಬ್ಬೂ !!

ಸೂಳೆ (Sharply) ಸುಬ್ಬೂನ ಎಬ್ಬಿಸ್ ಬೇಡ್ವೇ, ಪಟಿಂಗೀ !!

ಪುಟ್ಟಾ ಹೌದೂವ್ಮಾ! ಮರ್ತೆ! ಸುಬ್ಬು! ಪಾಪ! ರಾತ್ರಿ, ಹಗ್ಲೂ ನಿನ್ನ ನ್ನ ನೋಡ್ಕೋತಿದ್ದಾನೆ! ಚೀರ್ಯೋವ್ಮಾ, (ಮೆಲ್ಲಗೆ) ಚೀರ್ಯೋ ಸುಬ್ಬು! (Turning the glass to the right centre) ಅವ್ಮಾ! ಅಜ್ಜೀಗೆ ಚೀರ್ಯೋ ಇಲ್ಲ! ಕಾಸ್ ಬಂಗ್ಲೇಲಿ ಆ ಬೆಂಕಿ ಕೋಳಿ ನೋಡ್ದಾಗ್ನಿಂದ ಅಜ್ಜಿ ನನ್ಕಣ್ಗೆ ಆಗ್ಲಿ!' ಬಪ್ಪಾ! ಅಂಜಿಕೆಯಾಗುತ್ತವ್ಮಾ! ಅಜ್ಜೀನ್ ನೋಡಿ ದಾಗ್ಲೆಲ್ಲಾ! (ಥಟಕ್ಕನೆ) ನಾನು ಒಂದು ವೇಳ ಸಿದ್ದ ಹೋದ್ರ, ನನ್ನ ಬಟ್ಟಿಟ್ಟು ಎಲ್ಲಾದ್ರೂ ಹೋಗ್ತೀಯಾವ್ಮಾ, ಅಜ್ಜಿ ಹೇಳ್ದಾಂಗೆ ?

ಸೂಳೆ : (ಅತಿ ಕಷ್ಟದಿಂದ) ಇಲ್ಲಾ ಕಂದ! ಪುಟ್ಟಾ, ನಿನ್ನಾಣೆಗೂ! . . ನನ್ನಾಣೆಗೂ! ಅಜ್ಜಿ ಅಲ್ಲಾ ಸುಬ್ಬೂ ಆಣೇಗೂ ! (giving a gentle yet strong slap to ಪುಟ್ಟಾ's cheek) ಎಲ್ಲಾ ್ರಣೆಗೂ! . ದೇವ್ರಾಣೆಗೂ ನಿನ್ನ ಬಿಟ್ಟು ಕಂದಾ, ನಾನೆಲ್ಲೂ ಹೋಗೋದಿಲ್ಲ! chin chin (ಗಾಜಿಗೆ ಗಾಜು

ತಾಕಿಸಿ) ಚ್ಯೀರ್ಸ್ಯೋ, ನನ್ರಾಣಿ!' [The mother and daughter raise the glasses to their lips At her very first gulp, ಪುಟ್ಟಾ drops her glass and collapses on her mother's breast hardly succeeding in murmuring "ಮ್ಮಾ...!"]

ಸೂಳೆ : [Gazing down at the prostrate ಪುಟ್ಟಾ brings down her unfinished glass, places it on the teapoy and empties the rest of the prussic acid in the little bottle into it! Dropping the bottle, gathers up her dead child in her arms and with her hand caressing the dead face on her lips, kissing the dead lips and dead eyes indulges in a drunken apostrophe] ಈಗ್ ಹೆದರ್ಬೇಡ ನನ್ನ ಕಂದಾ! ನಿನ್ನ ವಯಸ್ನಲ್ಲೀ ನಿನ್ಹಾಗೆ ನಾನಿದ್ದೆ ನನ್ನ ಕಂದಾ! ಆದ್ರೆ ನೀನ್ ಹೆದರಿದ್ಹಾಗೆ ನನ್ನ ವಯಸ್ನಲ್ಲಿ ನೀನು ನನ್ನ ಹಾಗೆ ಆಗೋದಿಲ್ಲ, ನೀನು! ಈಗ! ಆ ಹದ್ದು ನಿನ್ನ ವಯಸ್ಸಲ್ಲಿ ನಾನು ನಿನ್ಹಾಗಿ ದ್ದೋವ್ಳು ಈ ವಯಸ್ಸಲ್ಲಿ ಹೀಗ್ ತಂದ ಪಾಪ ಅವನದ್ದೋ? ಸಮಾಜದ್ದೋ? ಇಲ್ಲ ನನ್ನ ಪುರಾಕೃತ ಪಾಪವ್ವೋ? ಯಾರು ನಿರ್ಧರಿಸೋರು? ಹ್ಯಾಗಿದ್ರೂನೂವೇ ನೀನು ಪುಟ್ಟಾ!' ಪುಟ್ಟಾ! ನನ್ನ ಸ್ಥಿತೀಗೆ ಬರೋದಿಲ್ಲ ನೀನು! (Laughs hysterically sobbing) **ಇದೊಂದು ಬಾಕಿ ಇತ್ತು ನನ್ನಪಾಪ ಜನ್ಮಕ್ಕೆ! ಖೂನಿ! ಹತ್ಯೆ, ಶಿಶುಹತ್ಯೆ ನನ್ನ ಶಿಶುಹತ್ಯ ನಾನೇ ಮಾಡ್ದೆ** (ಉನ್ಮತ್ತಳಾಗಿ ಕಿರಿಚುತ್ತಾ) ಯಾಕ್ ಮಾಡ್ದೇ? (In a sudden gust of anger, pointing out to a picture of Gandhi) **ಅಹಿಂಸಾ ಸಾರ್ತಾ ನಲ್ಲಾ** ಆತ, ಆ ಅಹಿಂಸೇಲಿ ಕೊಂದದ್ದು ನನ್ನ ಪುಟ್ಟಾನ್ನ! ತನು, ಮನ, ಹೃದಯದಲ್ಲಿ ಒಂದು ಪಾಪಾನೂ ಅರೀದೆ, ತೋಚ್ದೆ, ಹೂವಿನಹಾಗೆ ಅರಳ್ತಿರೋ ನನ್ನ ಕಂದನ್ನ, ನನ್ನೀ ಹಾಳು ಸ್ಥಿತೀಗೆ ತಂದ ಸಮಾಜಾಂಬೋ ಹದ್ದಿನ ಬಾಯಿಗೆ ತುತ್ತಾಗದೇ ಇರೋಕೇ

ನಾನ್ ಹುಡ್ಗಿಯಾದಾಗ ಮೂಸದೆ ಬಾಡದೆ ಇದ್ಹಾಗೆ ಇದ್ದ ನನ್ನ ಪುಟ್ಟಾನ್ನ (hysterically kissing the dead face) ನನ್ ಕಂದನ್ನ! ನಾನ್‌ಕೊಂದದ್ದು ನನ್ನುಖ! ನನ್ರಕ್ತ! ನನ್ ದೇಹ! ಸ್ವಲ್ಪಿರೂ ಕಂದಾ! ಬಂದೆ (Lauhghing) ಹ್ಹ! ಹ್ಹ! ಹ್ಹ! ಒಳ್ಳೇ ಹುಚ್ಚು ನಾನು ಪುಟ್ಟಾ! ನಿನ್ನ ಜೊತೇಗೆ ನಾನ್ ಬರೋದೆ? ನನ್ನ ಪಾಪಕ್ಕೆ ನಾನಿಳಿಯೋ ನರಕವೆಲ್ಲಿ! ಒಂದ್ ಪಾಪ ಅರೀದೇ ಸೂರ್ಯರಶ್ಮಿ ಹಾಗೆ ಬೆಳಗ್ನಿ, ಮನೇಲಿ ಇಳಿದು ಮನೆಯೆಲ್ಲಾ ಬೆಳ್ಳಂ ಬೆಳಗ್ಸಿ ಈಗ ನೀನು ತಿರುಗ್ಹೋಗ್ತಿದ್ದೋ ನಿನ್ನ ಲೋಕ ಎಲ್ಲಿ? ನೀನ್ ಬಂದ್ ಲೋಕಾನ್ ನೀನ್ ಸೇರ್ಕೊಂಡೆ! ನನಗ್ ಕಾದಿರೋ ನರ್ಕ ನಾನ್ ಸೇರ್ತೀನೆ! With her left - hand as her right aim is hugging the dead child's body and neck, she grabs the poison - laden whisky glass and weirdly as in a mad trance) ಚ್ಹೀರ್ಯೋ ಹೇಳೇ ಪುಟ್ಟಾ! ನಾಳೆ examination ತಪ್ಪಿಸ್ದೆ ನಿನ್ಗೇ?! ಸಂಸ್ಕೃತದಲ್ಲಿ ೬೮ ಆಗ್ಬೇಕೂಂತ ಆಶೆ ಪಟ್ಟೆ ಅಲ್ಲೇವ, ಕಂದಾ? ಈ ಹಾಳು ಲೋಕದ ಪರೀಕ್ಷೆ ನಿನಗ್ಯಾಕ್ ನನ್ ರಾಣಿ ಈಗ!? ನಿನಗೆ ತಿಳಿದ ಗೀರ್ವಾಣ, ಪರೀಕ್ಷಿಸೋಕೆ, ಸರಸ್ವತೀ, ಲೋಕಾನೇ ಸೇರಿರ್ತಿಯಾ, ಇಷ್ಟ್ಹೊತ್ತಿಗೆ! ಎಲ್ಲಿ ಹೇಳು! ಕಂದಾ! (ನಿದಾನವಾಗಿ ಪುಟ್ಟಾ ಕೆನ್ನೆ ತುಟಿಗಳಮೇಲೆ ತನ್ನ ಮುಖವನ್ನು ಹೊರಳಿಸುತ್ತಾ ಅವಳನ್ನು ತಬ್ಬಿಕೊಂಡು ಮಗುವನ್ನು ಉಯ್ಯಾಲಾಡಿಸುವಂತೆ ಮೈ ತೂಗುತ್ತಾ, —drawling sings)

.... ..ತಾ ಯೆ . ಭಾ ರ....ತೀ. .. .... . ..

.. ಬಾಲಕಿಯರ ತಿಳಿ | ನಾಲಗೆಯೊಳು ನೀ . . ... ...

. ..ನೋಲಗಿಸುತೆ ಮೃದು | ಲೀಲೆಗಳವಳೇ ... ...,..........

(Weirdly) ನನ್ನ ಕಂದಾ! ನಿನ್ನ ತಿಳಿ ನಾಲ್ಗೇಲಿಲ್ದೇ ಇರೋ ಸಂಸ್ಕೃತ ಇನ್ನೆಲ್ಲಿದೇ ಕಂದಾ! ಪುಟ್ಟಾ! ಅಲ್ಲಿ ಹೇಳತಾ ಇದೀಯಾ ಇಡ್ಡಾ!? ಎಷ್ಟು ಇಂಪು ನಿನ್ನ ಕಂಠ!?. ..ಎಷ್ಟು ತಿಳಿ ನಿನ್ನ ನಾಲಿಗೆ. ... . ಎಷ್ಟು ಶುದ್ಧ .... ನಿನ್ನ ಸಂಸ್ಕೃತ ?!...............

... .. . ನಿನ್ನ ಪರೀಕ್ಷೇ ಸತ್ಯಲೋಕದಲ್ಲಿ! ಅಲ್ಲಿ ನೀ ಪಾಸಾಗೋದು first classಉ! ನಾನು first class ಆಗಿ ಪಾಸಾದದ್ದು ಈ ಸೂಳೇ ಲೋಕದಲ್ಲಿ ಒಂದು ಚ್ಚೀರ್ಯೋ ಹೇಳೆ! ಒಂದು chin chin ಹೇಳೇ! ಎಲ್ಲ್ರ ಸಂತೋಷಕ್ಕೇ ಅಂತ ನೀನ್ ಕುಡಿಯೋಳಲ್ವೇ ನನ್ನ್ ಕಂದಾ ನಾನ್ ಹುಟ್ಟಿ ಬೆಳದದ್ದೂ ಸಮಾಜದ ಸಂತೋಷಕ್ಕೇ ನನ್ನ ಸಂತೋಷಕ್ಕೇ? ನಿನ್ನ ಸಂತೋಷಕ್ಕೇ? .. ಯಾರ ಸಂತೋಷಕ್ಕೂ ಅಲ್ಲ ನನ್ನ 'ಚ್ಚೀರ್ಯೋ' ನೀನ್ ನೀನ ಕಂದಾ! ಪುಟ್ಟಾ!! ಸುಬ್ಬೂ ಸುಬ್ಬೂನೂವೆಯು! ಅವ್ವಾ ಅಮ್ಮಾನೆ! ಸಮಾಜ ಸಮಾಜಾನೇ! ಅದ್ರೆ ನೀನೂ ನನ್ಕಂದಾ! chin chin! (Taps her glass to the dead chin) ಚ್ಚೀರ್ಯೋ ಪುಟ್ಟಾ! ನಿನ್ ಸಂತೋಷಕ್ಕೆ (Grabbing the the dead face to her own face, rigidly and so hugging her that the dead body is on her own, gulps the glass and even before she drops the glass, her head drops down to her breast, dead]

[The scene is still for fully a minute and this death reigning scene, is fermented by the sweetly sonorous alarm of the clock that subbu has set for 2-30 A M. Precise)

ಸುಬ್ಬು (Entering) ಇದೇನಿದು, ದೀಪ ಇನ್ನೂ off ಮಾಡೇ ಇಲ್ಲ! ಸುಸ್ತು ಚಿನ್ನಾ!! ಪಾಪ! ದೇವ್ರುದಯ!— ಡಾಕ್ಟರ್ ಹೇಳ್ದ! worries ಎಲ್ಲಾ ಬಿಟ್ಟ್‌ಬಿಟ್ಟು "rest alone must rescue her" ಅಂತ! ಒಳ್ಳೇ ನಿದ್ರೆ! ಆದರೂ medicine ಕೊಡ್ಲೇ ಬೇಕು (ತಿರುಗಿನೋಡಿ)ಪುಟ್ಟಾ! ಪಾಪ, ನಾಳೆ ಪರೀಕ್ಷೇನೂ ಮರ್ತುಬಿಟ್ಟು ಅಮ್ಮನಮೇಲೆ ಬಿದ್ಕೊಂಡಿಧಾಳೆ! ಈಗ ಅವಳ್‌ನೆತ್ತಿ ನಿದ್ರೆ ಕೆಡದೆ ತಿರುಗಿ ಮಲಗ್ಸಿ ಬೆಳಿಗ್ಗೆ ಬೇಗ ಎಬ್ಸಿ ಆ sanskrit ಪಾಠ ತಿರಗೂ ಅವಳ ಬಾಯಿಂದ ಕಿರ್ಲ್ಸೀ! ಮಂಕು! ...... ಹುಂ! (Goes to the dressing table and holds an ounce

- glass up against the light) ಕೊಳೆ (Approaching a wash basin, drops a piece of soap into the glass and dripping a few drops of water, whirls the soap in the glass Rescuing the piece of soap and restoring it to the soap box, fills the ounce glass with water and cleans it with his forefinger Snatching at a clean napkin, twists it into the glass and dries it With the now crystal clear ounce glass glistening on the table, holds up a 12oz bottle of medicine and glancing at the label, murmurs) "Directionsಉ'" (Replaces it on the table and exits R, and re-enters, almost immediately with a pair of spectacles on his nose and glancing around) ಅನ್ಯಾಯ, ಧೂಳು! ಕನ್ನಡಕ' (Removes his glasses and placing them on the table exits and re-enters with a piece of Velvet and polishes his glasses setting the glasses again on his nose opens the cork of the bottle of mixture and meticulously reads aloud the directions on the label "One doze for every three hours ಸ'? ಈಗ already five minutes late ಉ'' and pours out the doze directed in accordance with the instruction on the label Placing the now - medicine filled ounce glass on the table re - corks the medicine bottle and carefully replacing it, his right hand takes up the medicine filled ounce glass and approaches the corpses with the medicine glass in his left-hand, he gently taps ಸೂಳೆ's cheek) ಚಿನ್ನಾ! ಚಿನ್ನಾ! ಚಿನ್ನಾ! ಚಿನ್ನಾ!! ಚಿನ್ನಾ!!.... ಚಿನ್ನಾ!!........ಹೋದ್ಯಾ! ಹೋಗೇ ಹೋದ್ಯಾ . ತ್ಸು ತ್ಸು ತ್ಸು ತ್ಸು! ಪುಟ್ಟ ಪಾಸು! ನಾಳೆ ಪರೀಕ್ಷೆ! ಊಂ? . ತಿಳೀಬಾರ್ದು, ಮೊದಲು ಇವಳ್ನ ಮೆಲ್ಲಗೆ ಎತ್ಕೊಂಡ್

ಹೋಗಿ ಮಲಗ್ಸಿ ಬಿಡಬೇಕು (his right-hand, touches ಪುಟ್ಟಾ, and feeling the death-cold cheek and arm of ಪುಟ್ಟಾ, drops the ounce glass which crashes to the floor and suddenly yells out) ಹಯ್ಯಯ್ಯೋ! ಪುಟ್ಟಾನೂವೇ! ನೀನೂವೇ? ಪುಟ್ಟಾ! ನಮ್ಪುಟ್ಟಾ! (suddenly smelling the empty glass, in 'ಸೂಳೆ's" prone hand and other near Putta's) ವಿಷ ಕುಡ್ದೂ! Prussic Acidoo! (sobbing collapses on the corpses whimpering) ಅಯ್ಯೊಯ್ಯೊಯ್ಯೋ! ಇಬ್ಬರೂ ಹೋದ್ರಾ?! ಇ ನ್ಯಾ ಕ್ ನಾ ನ್ನ್ ಬ ದ್ಕಿ ರೋ ದೂ !?.. ? ? (Raises himself up and meandering to ಸೂಳೆ's face and rubbing his face on the dead ಸೂಳೆ's face) ಚಿನ್ನಾ! ಚಿನ್ನಾ! (in heart-breaking sobs) ನೀನ್ ಹೋದ್ರೂನೂವೆ ಚಿನ್ನಾ! ನಮ್ಮಿಬ್ಬರ ಜ್ನ್ಯಾಪ್ಕಕ್ಕೇಂತ ಇದ್ದ ಇವಳ್ನೂವ ಕರ್ಕೊಂಡ್ ಹೋಗ್ಬಿಟ್ಟ್ಯಾ!?? ಚಿನ್ನಾ! ನ್ಯಾಯವೇ?! ನೀತಿಯೇ ಧರ್ಮವೇ? ಹಯ್ಯೋ ಚಿನ್ನಾ! ನಿನ್ನ ಕೈಹಿಡಿಯೋಕ ಯೋಗ್ಯತೆ ಇಲ್ಲದ ನನ್ನ ಕೈನ ಹೀಗೆ ಬಿಟ್ಬಿಟ್ ಹೋಗಬಹುದೇ? ತಪ್ಪು ಚಿನ್ನ! ನೀ ಮಾಡಿದ್ದು ತಪ್ಪು! ಹಯ್ಯೋ! ಇನ್ನೇನು ಗತಿ! ಚಿನ್ನಾ! ಚಿನ್ನಾ! ಚಿನ್ನಾ! ಚಿನ್ನಾ! ನನಗ ಇನ್ನು ಏನ್ನಂ ತೋಷ ಇಹದಲ್ಲೀ!! (Collapses shrieking out "ಚಿನ್ನಾ! ಚಿನ್ನಾ! ಚಿನ್ನಾ!") [Subbu's Shrieks having awaken the mother, she slowly stalks into the room]

**ಸೂಳೆ ತಾಯಿ :** ಇದೇನು ಸುಬ್ಬೂ! ಆಗ್ಹೋಯ್ತು ಅವಳ ಕಲ್ಸ? ... ಬಡ್ಕೊಂಡೇನ್ ಫಲಾ!? ಕೀರ್ಲಿದರೇನ್ ಪ್ರಯೋಜ್ನ? ಸತ್ತವ್ರು ತಿರುಗ್ ಬರೋದಿಲ್ಲ! ಆವಳಾಯ್ತು! ಅವಳ ಕರ್ಮವೂ ಆಯ್ತು! ಈಗ್ ಮನೇಲಿ ನೀನೊಬ್ನೇ ಗಂಡ್ಸು! ಅವಳ "ವಿಲ್ಲು" ನಿನಗೋ ನನಗೋ ಪುಟ್ಟಾಗೋ ಬರದೇ ಬರದಿರ್ತಾಳೆ!

ಯಾರಿಗ್ ಬರದರೇನು? ಪುಟ್ಟಾನೂ, ನಾನೂ, ನೀನೂ!— ಸುಬ್ಬು! ನೀನೂ ಹೊಂದ್ಕೊಂಡಿರೋವಗರ್ ನಿನ್ನ್ ಚಿನ್ನನ್ ದುಡ್ಡ್ ನಮ್ಮ್ ನ್ಪಲ್ಲಿರೋವ್ರ್ಗ ? ! ಹೋದ ಪ್ರಾಣಿ ಹೋಯ್ತು! ನಿನ್ ದುಡ್ಡೇನೂ! ನನ್ ದುಡ್ಡೇನೂ! ಪುಟ್ಟಾನ ದುಡ್ಡೇನೂ?

ಈ ಮೂವತ್ತು ವರ್ಷ, ನಾನೂ ನಿನ್ನ್ ಚಿನ್ನಾನೂ, ಬೆಳ್ದು ಬದುಕಿದ್ದು ನಮ್ಮ ನಮ್ಮ ಸ್ನೇಹದ್ಲಲ್ಲಿ ಚಿನ್ನಾ ಸತ್ತೋ ಪುಟ್ಟಾ ಇದಾಳ! ಏನು ಸುಬ್ಬೂ, ಅವಳ ಕಾಲ ಆಗ್ಹೋಯ್ತು! ನನ್ನ ಕಾಲಾನೂ ಈ ಹೊತ್ತೋ ನಾಳೇನೋ ಆಗ್ಹೋಗತ್ತೆ! ಆದರ ನನ್ನ್ ಮುಪ್ಪಿನಲ್ಲ ನನ್ನ್ ಜೀವನಕ್ಕೆ, ನನ್ ಕಸಬು ಗಿರಾಕೀಗೆ ಪುಟ್ಟಾ ಇದಾಳ ಮಲ್ಲಗೆ ಪುಟ್ಟಾನ ಅವರಮ್ಮ ಹಣಾಂತ ತಿಳಿಯೋಕ್ ಮುಂಚೇ ಒಳಗ್ ಸಾಗ್ಸ್ಕೊಂಡ್ ಹೋಗು! ನಾವ ಪರೀಕ್ಷೇಲ ಪಾಸಾದ್ರ. . ಸೂಳ್ಗಾರ್ಕೇಲಿ ಓದಿದ ಮಾತ್ಯೇಂದ್ರ, ಗಿರಾಕಿ ಜಾಸ್ತಿ! ನಿನ್ಗೂ ಲಾಭ! ನನ್ಗೂ ಲಾಭ! (Gradually approaches the two corpses and in trying to gently lift up ಪುಟ್ಟಾ, feels ಪುಟ್ಟಾ's ice cold arms dropping dead, mechanically her fingers stray over ಪುಟ್ಟಾ and ಸೂಳೆ and finding both dead cold in a frenzy) ಹಯ್ಯೋ! ಹಯ್ಯೋ!. ಮುಂಡೇ ಮುಂಡೇ ನಾನು ನನ್ನ ಹೊತ್ತು ಹೆತ್ತು ನನಗ ನನ್ನ ಕಷ್ಟ ಕಲ್ಸ್ಕೊಟ್ಟು ಮುಂದಕ್ಕೆ ತನ್ನ ಮನೆ, ಬಾಕ್ಲು, ಹೊಲ, ಗದ್ದೆ ಮಾಡ್ಸ್ಕೊಟ್ಟು ನಿನ್ನ ಈ ಸ್ಥಿತೀಗ್ ತಂದಾಗ ನನ್ನ ಮುಪ್ಪಿನಲ್ಲ ನನ್ನ ಜೀವನಕ್ಕೇಂತಿದ್ದ ಈ ಪುಟ್ಟಾನ್ನೂ ನುಂಗಿಕೊಂಡು ಹೋದ್ಯಲ್ಲೇ!! ಮುಂದೇ!! **ಮುಂಡೇ !!** **ಮುಂಡೇ !!** (ಪ್ರತಿಯೊಂದು ಮುಂಡೇ'ಗೂ ಸೂಳೆಯು ಏಪದ ಜರತದ ಸೋಲಿ ತನ್ನ ಕೈಗಳಿಂದ ಬಾರಿಸುತ್ತಾ) ನನ್ಮುಂದಿನ ಒಕ್ಲು ನನ್ನ ಸೂಳ್ಗಾರ್ಕೆ ಕಸ್ಬು ನಾನು ಗಿಟ್ಟಿಸ್ಕೊಳ್ಳೋಕ ನನಗೇಂತ ಇದ್ದ ಪುಟ್ಟಾನ್ನೂ **ಎಳ್ಕೊಂಡ್ಹೋದ್ಯಲ್ಲೇ** ಮುಂಡೇ ಮುಂಡೇ

ಮುಂಡೇ! ನನ್ನ ಮುಪ್ಪಿನಲ್ಲಿ ನನ್ನ ಜೀವನಕ್ಕೇಂತ ಇದ್ದ

ಪುಟ್ಟಾನ್ನೂ ಸೆಳಕೊಂಡ್ಹೋದ್ಯಲ್ಲೇ! ಮುಂಡೇ ! ಮುಂಡೇ ! ನನ್ನ ಹೊಟ್ಟೇಲ್ಹುಟ್ಟಿದ **ಮುಂಡೇ!** (She suits action to the word by beating bare palm resoundingly on the dead woman's stomach) "ಅಯ್ಯೋ, ಹಾಳ್ ದೇವರ್‍ಗಳ್ರಾ, ನಿಮುಗ್ಮಾಡದ್ಪೂಜೆ ಇಲ್ಲಾ! ನಿಮುಗೊಪ್ಪಿಸದ ನೇವೇದ್ಯ ಇಲ್ಲ! ನಿಮ್ಹಾಳು ಬ್ರಾಹ್ಮಣ್ರು ತಿಂದು ತೇಗದ ಪ್ರಸಾದ ದಕ್ಷಿಣೆ ಇಲ್ಲ! ಆದ್ರೂ ನೀವು ನೋಡ್ತಿದ್ರಾ ಈ ಅನ್ಯಾಯಾನ! ನನ್ನ ಮುಪ್ಪಿನಲ್ಲಿ ನನ್ನ ಜೀವನಕ್ಕೇಂತ ಇದ್ದ ಈ ಹುಡಿಗೀನೂ ಎಳ್ಕೊಂಡು ಹೋದಾಗ ನೀವಾದ್ರೂ ಒಳ್ಳೇ ಬುದ್ಧಿ ಕೊಟ್ಟಿರಬಾರ್ದೆ ಈ ಪಾಪಿ ಮುಂಡೇಗೆ? (Resumes striking dead ಸೂಳೇ's stomach, screaming hysterically "ಮುಂಡೇ! ಮುಂಡೇ! ನನ್ನ ಮುಪ್ಪಿನಲ್ಲಿ ನನ್ ಜೀವನಕ್ಕೇಂತಿದ್ದ ಹುಡಿಗೀನೂ ಎಳ್ಕೊಂಡ್ ಹೋದ್ಯಲ್ಲೇ!")

[ಸುಬ್ಬುವು ಸೂಳೆಯ ಶವವ ಪಾವಗಳ ಮೇಲೆ ತಲೆಯನ್ನು ಚಚ್ಚಿಕೊಳ್ಳುತ್ತಾ ಗೋಳಾಡುತ್ತಲೂ... ಮುದುಕಿಯು ಪೂರ್ವೋಕ್ತಂ ಬಡಕೊಳ್ಳುತ್ತಾ ಶವದ ಜಠರದ ಮೇಲೆ ಹಸ್ತವನ್ನು ಸಭಿಕರು ಕೇಳಬರುವಂತೆ ತಾಡಿಸುತ್ತಿರಲು, ಪರದೆಯು ಮೆಲ್ಲನೆ ಜಾರಿದ ಅನಂತರವೂ ಮುದುಕಿಯು "ಮುಂಡೇ! ಮುಂಡೇ! ನಿನ್ನ ಹತ್ತಿಂಗಳು ಹೊತ್ತು ಹೆತ್ತು ಮುಂದಕ್ ತಂದದ್ದಕ್ಕೆ...ನನ್ನ ಮುಪ್ನಲ್ಲಿ ನನ್ ಜೀವ್ನಕ್ಕೆ... ಇದ್ದ ಈ ಹುಡುಗೀನ್ನೂ ಎಳ್ಕೊಂಡ್ಹೋಗಿ ನನ್ಹೊಟ್ಟೇ ಮೇಲ್ಹೊಡ್ದ್ಯಲ್ಲೇ!" ಎಂಬ ಆರ್ತನವೂ ಕರತಾಡನವೂ ಕೇಳಬರುವುದು ] .

# FINISH

ಕೈಲಾಸಂ ಕಟ್ನಿಂದ

ನಿರೀಕ್ಷಿಸಿ!

ಹೆಣ್ಣಿನ ಬಾಳು ಕಣ್ಣೀರು:

ಘಟ್ಟ ೨

# ಗರ್ತ್ರೀ

ಅಥ್ವಾ

ಮೊಮ್ಮಗಳ ಮುಯ್ಯಿ

ಅಥ್ವಾ

ಗುಟ್ಟಾಗಿಟ್ರೆ ಗುಣ್ವಿಲ್ಲ

ಅಚ್ಚಿನಲ್ಲಿದೆ

( ಮೂರು ತಲೆಮಾರುಗಳ ದುರಂತ )

